# ಕೃತಜ್ಞತೆಗಳ ಸಮರ್ಪಣೆ

ಶ್ರೀ ಸಿದ್ಧಗಂಗಾಮಠ ಭಾರತದಲ್ಲೇ ಪ್ರಖ್ಯಾತಿಗಳಿಸಿರುವ ಧಾರ್ಮಿಕ ಸಂಸ್ಥೆ. ಮಹಾ ವಿದ್ಯಾಕೇಂದ್ರ. ಇಲ್ಲಿ ನಡೆಯುತ್ತಿರುವ ತ್ರಿವಿಧ ದಾಸೋಹಗಳು ಜಗಜ್ಜನಿತ. ಸಹಸ್ರಾರು ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿರುವ ಬೃಹತ್ ಸಂಸ್ಥೆ. ಇವೆಲ್ಲವೂ ಪರಮ ಪೂಜ್ಯ ಶ್ರೀ ಶ್ರೀ ಗಳವರ ನಿರಂತರ ದುಡಿಮೆಯ ಫಲದಿಂದ ಸಾಗುತ್ತಿವೆ.

ಈ ಬೃಹತ್ ವಿದ್ಯಾಕೇಂದ್ರದಿಂದ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ಮಾಸ ಪತ್ರಿಕೆ ನಾಡಿನ ಜನತೆಗೆ ತಿಳಿದೇ ಇದೆ ಎಂದು ಭಾವಿಸಿದ್ದೇವೆ. 'ಸಿದ್ಧಗಂಗಾ' ಪತ್ರಿಕೆ ಹನ್ನೆರಡು ವರ್ಷಗಳು ಯಶಸ್ವಿಯಾಗಿ ಮುನ್ನಡೆದು ಹದಿಮೂರನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ನಮ್ಮ ಮಾನ್ಯ ಓದುಗರಿಗೆ ಅನಂತ ವಂದನೆಗಳು.

## ಅಧಿಕ ಸಂಖ್ಯೆಯಲ್ಲಿ ಪ್ರಸಾರ

'ಸಿದ್ಧಗಂಗಾ' ಐದು ಸಹಸ್ರಕ್ಕೂ ಮೀರಿ ನಾಡಿನ ಉದ್ದ ಅಗಲಕ್ಕೂ ಸಂಚರಿಸಿ ಓದುಗರ ಕೈ ಸೇರುತ್ತಿದೆ. ಈ ಪ್ರಸಾರ ಕಾರ್ಯದಲ್ಲಿ ನಾಡಿನಾದ್ಯಂತ ಶ್ರೀ ಮಠದ ಅಭಿಮಾನಿಗಳು, ಹಿತೈಷಿಗಳು ಮತ್ತು ಹಳೆಯ ವಿದ್ಯಾರ್ಥಿಗಳು ಸ್ಫೂರ್ತಿಯುತ ಸಹಕಾರ ನೀಡುತ್ತಿದ್ದಾರೆ. ಅವರೆಲ್ಲರಿಗೂ ಹೃತ್ಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇವೆ

## ಅನುಪಮ ಸೇವೆ

### 'ಸಿದ್ಧಗಂಗಾ'ದ

ಅತ್ಯಧಿಕ ಪ್ರಸಾರಕ್ಕೆ ಆಯಾ ಪ್ರದೇಶಗಳಲ್ಲಿ ವಿಶೇಷವಾಗಿ ಶ್ರಮಿಸಿ ಸಹಕಾರ ನೀಡುತ್ತಿರುವ ಈ ಆತ್ಮೀಯ ಬಂಧುಗಳಿಗೆ ಶ್ರೀ ಕ್ಷೇತ್ರದ ಪರವಾಗಿ ಅನಂತ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

1 ಶ್ರೀ ಕೆ. ಎಸ್. ಬಸವಲಿಂಗಪ್ಪನವರು, ಮೈಸೂರು.
2 ಶ್ರೀ ಸಿ. ಬಿ. ಶಂಕರಪ್ಪನವರು, ದೇವನಹಳ್ಳಿ.
3 ಶ್ರೀ ಎಂ. ಬಸವಯ್ಯನವರು, ಗುಬ್ಬಿ.
4 ಶ್ರೀ ಡಿ. ಬಿ ಮೃತ್ಯುಂಜಯಪ್ಪ, ದೊಡ್ಡಸಾರಂಗಿ, ತುಮಕೂರು ತಾ||
5 ಶ್ರೀ ಆನಂದಪ್ಪ, ಬಿ ಇ. ಎಂ ಎಲ್, ಕೆ. ಜಿ. ಎಫ್.
6 ಶ್ರೀ ಶಿವಶಂಕರಾರಾಧ್ಯ, ಎನ್. ಜಿ. ಇ. ಎಫ್, ಬೆಂಗಳೂರು.
7 ಶ್ರೀ ಬಿ. ಸೋಮಶೇಖರಯ್ಯ ಕೆ. ಇ, ಬಿ, ಶಿವಸಮುದ್ರ
8 ಶ್ರೀ ಬಿ ವಿರೂಪಾಕ್ಷಯ್ಯ, ಎಲ್. ಐ. ಸಿ., ಬೆಂಗಳೂರು.
9 ಶ್ರೀ ಟಿ ಬಿ. ವಿರೂಪಾಕ್ಷಯ್ಯ, ರಾಜಾಜಿನಗರ, ಬೆಂಗಳೂರು.
10 ಶ್ರೀ ಬಸವರಾಜಪ್ಪ, ಲಕ್ಷ್ಮೀಪುರ, ನೆಲಮಂಗಲ ತಾ||
11 ಶ್ರೀ ಎಂ. ಬಿ. ಶಿವಲಿಂಗಯ್ಯ, ಮಡೇನೂರು, ತಿಪಟೂರು ತಾ||
12 ಶ್ರೀ ಟಿ. ಗುರುದೇವಪ್ಪ, ಹಿರೆಬೆಳುಗುಲಿ, ಹಾಸನ ಜಿಲ್ಲೆ.

ಇನ್ನೂ ಅನೇಕ ಆತ್ಮೀಯ ಬಂಧುಗಳು ಎಲ್ಲರಿಗೂ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಮರ್ಪಿಸುತ್ತದೆ. ಯಥಾ ರೀತಿ ಆಯಾ ಪ್ರದೇಶದ ಮಾನ್ಯ ಓದುಗರು 1977 ನೇ ಸಾಲಿಗೆ ತಮ್ಮ ಚಂದಾ ವಂತಿಕೆಯನ್ನು ಮುಂದುವರಿಸುವುದರ ಮೂಲಕ ಅವರುಗಳಿಗೆ ಸಹಕಾರ ನೀಡಬೇಕಾಗಿ ಮನವಿ ಮಾಡಿಕೊಳ್ಳುತ್ತೇವೆ.

ಪ್ರಕಾಶಕರು

# 'ಸಿದ್ಧಗಂಗಾ'

ಡಿಸೆಂಬರ್ , ೧೯೭೬

ಸಂಪುಟ-೧೨ ಸಂಚಿಕೆ-೧೨


ಮುಖ ಪುಟ

ರಸ ತುಂಬಿದ ಬೆಳೆ ಹೊಲದಲಿ ನಿಂದು ।
ಹೊಸ ಚೇತನವದ ಬೆಳೆದವಗಿಂದು ॥


ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಡಾ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಸಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಅಜೀವ ಸದಸ್ಯತ್ವ: 101 ರೂ


## ಶ್ರೀವಾಣಿ



ದೇವ ದೇವನಿಂದ ಸೃಷ್ಟಿಗೊಂಡ ಜಗತ್ತು ಸೃಷ್ಟಿಗೊಂಡೊಡನೆ ತಾನು ದೇವಾಂಶ ಸಂಭೂತ ಎಂಬುದನ್ನು ಮರೆತು, ಮತ್ತೆ ಮರೆತುದನ್ನು ಅರಿಯಲು ಒದ್ದಾಡುತ್ತಿದೆ. ಅರಿತಂತೆ ಸೋಗುಹಾಕಿ ಸತ್ಯದ ಮುಖಕ್ಕೆ ಮಸಿ ಬಳಿಯುತ್ತಿದೆ. ಆದರೆ ಭಗವಂತನ ಸೃಷ್ಟಿ ವಿಚಿತ್ರವಾದುದು, ವಿಶಿಷ್ಟವಾದುದು, ಸ್ವಪರಿಪೂರ್ಣವಾದುದು. ಜಗತ್ತಿನಲ್ಲಿ ಸೃಷ್ಟಿಗೊಂಡ ದುಷ್ಟಶಕ್ತಿಯನ್ನು ಎದುರಿಸಲು ಅದಕ್ಕಿಂತ ಪ್ರಬಲವಾದ ಶಿಷ್ಟಶಕ್ತಿಯನ್ನು ಸೃಷ್ಟಿಸಿದ್ದಾನೆ. ಈ ಎರಡು ವಿರುದ್ಧ ಶಕ್ತಿಗಳ ಘರ್ಷಣೆ ಯುಗಯುಗಗಳಿಂದಲೂ ನಡೆಯುತ್ತಿದೆ. ಇದರಿಂದಾಗಿ ಕೆಲವು ವೇಳೆ ಸುಖ, ಕೆಲವು ವೇಳೆ ದುಃಖ ಒಂದಾದ ಮೇಲೊಂದು ಬರುತ್ತಿವೆ. ಎರಡೂ ಸಮರಸಗೊಂಡಾಗ ಸಂತೋಷ ಉಕ್ಕಿ ಹರಿಯುತ್ತದೆ. ಎಲ್ಲೆಲ್ಲೂ ಶಾಂತಿ ನೆಲಸುತ್ತದೆ. ಅಂತೂ ಹೋರಾಟ ನಿರಂತರವಾದುದು. ಅನಿವಾರ್ಯವಾದುದು. ಈ ಘರ್ಷಣೆಯಲ್ಲಿಯೇ ಗಹನ ತತ್ವದ ಉದಯ. ಹೋರಾಟದಲ್ಲಿಯೇ ವಿಶ್ವಶಾಂತಿಯ ನವೋದಯ. ಜಗತ್ತಿನಲ್ಲಿ ಒಳಿತೂ ಇದೆ ಕೆಟ್ಟದ್ದೂ ಇದೆ. ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆ ಅತ್ಯಗತ್ಯ. ಈ ಹೋರಾಟಕ್ಕೆ ಅಂತ್ಯವಿಲ್ಲವೆಂದಲ್ಲ, ಇದೆ. ಎಲ್ಲಿಯ ತನಕ ಮನುಷ್ಯನಲ್ಲಿ ತಾನು ದೇವಾಂಶಸಂಭೂತ, ಭಗವತ್ ಸಾಕ್ಷಾತ್ಕಾರವೇ ಬದುಕಿನ ಚರಮುಗುರಿ ಎಂಬ ಅರಿವು ಮೂಡುವುದಿಲ್ಲವೋ ಅಲ್ಲಿಯ ತನಕ ಹೋರಾಟ ತಪ್ಪಿದ್ದಲ್ಲ. ಅಂತಹ ದಿವ್ಯ ಸಾಮೂಹಿಕ ಪ್ರಜ್ಞೆ ತಿಳಿಗೊಂಡು ಜಾಗೃತವಾದಾಗ ಹೋರಾಟದ ಅಂತ್ಯ. ಆಗ ಅವನ ನಾಗರಿಕತೆಗೆ, ಸಂಸ್ಕೃತಿಗೆ, ವಿಜ್ಞಾನ ಸಂಶೋಧನೆಗೆ, ಅತ್ಯಾಧುನಿಕ ವಿಚಾರಗಳಿಗೆ ಬೆಲೆ ಬಂದು ಬದುಕು ಸಾರ್ಥಕವಾಗುವುದು. ಅಲ್ಲಿಯ ತನಕ ಧರ್ಮದ ಹೋರಾಟ ಅನೀತಿಯುತವಾದುದಲ್ಲ, ಅಧರ್ಮವಲ್ಲ, ಲೋಕ ವಿರುದ್ಧವಲ್ಲ. ಸತ್ಯಾರಾಧಕರು ತಮ್ಮ ಅಂತ್ಯದವರೆಗೂ ಸತ್ಯ ಸ್ಥಾಪನೆಗೆ, ಧರ್ಮಪ್ರಚಾರಕ್ಕೆ, ದೇಶದ ರಕ್ಷಣೆಗೆ, ಆತ್ಮಗೌರವಕ್ಕೆ ಸದಾ ಜಾಗೃತರಾಗಿ ಎದೆ ಮುಂದೆ ಚಾಚಿ ಹೋರಾಡುತ್ತಿರಬೇಕು.

—

# ಪರಿವಿಡಿ

ಸ್ಥಿರ ಶೀರ್ಷಿಕೆಗಳು:



# ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರ ಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಮತ್ತು ಪ್ರಬಂಧಗಳಿಗೂ ಸ್ವಾಗತವುಂಟು. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿರಬೇಕು. ಸ್ವೀಕೃತವಾದ ಲೇಖನಗಳಿಗೆ "ಸಿದ್ಧಗಂಗಾ" ಆಗಿಂದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಅಸ್ವೀಕೃತ ಲೇಖನಗಳನ್ನು ಹಿಂತಿರುಗಿಸಲಾಗುವುದಿಲ್ಲ. ಪ್ರಯುಕ್ತ ಹಸ್ತಪ್ರತಿಯ ನಕಲನ್ನು ಕಾದಿರಿಸಿಕೊಳ್ಳುವುದು ಸೂಕ್ತ. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು

"ಸಂಪಾದಕರು"


'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ -572131

ತುಮಕೂರು ಜಿಲ್ಲೆ


ಇವರಿಗೆ ಕಳುಹಿಸಿ ಕೊಡಬೇಕಾಗಿ ವಿನಂತಿ.

# ಮಾನ್ಯ ಓದುಗರಲ್ಲಿ ಮನವಿ

ವಿಳಾಸಗಳು ಬದಲಾವಣೆಯಾದಲ್ಲಿ ಮತ್ತು ಇತರೆ ವಿಷಯಗಳಿಗೆ ನಮ್ಮೊಡನೆ ವ್ಯವಹರಿಸುವಾಗ ವಿಳಾಸಗಳ ಹಿಂಬದಿಯಲ್ಲಿರುವ ಕ್ರಮಾಂಕ ಸೂಚಿಸಿ ಸಹಕರಿಸಿ.

'ಸಿದ್ಧಗಂಗಾ' ನಿರಂತರವಾಗಿ ತಮ್ಮ ಕೈಸೇರಲು ಅಜೀವ ಸದಸ್ಯರ ಬಳಗಕ್ಕೆ ಸೇರಿರಿ.

# ಬಂಗಾಲದ ಭಕ್ತ ಬಾವುಲರು

—ವಸಂತ.

ನಮ್ಮ ದೇಶದ ಸಾವಿರಾರು ಗ್ರಾಮಗಳಲ್ಲಿ ಭಾರತೀಯ ಸಂಸ್ಕೃತಿ ಸಜೀವನವಾಗಿದೆ. ಪಶ್ಚಿಮದ ಅನುಕರಣೆ ಇನ್ನೂ ತನ್ನ ವಿಕೃತ ಪ್ರಭಾವವನ್ನು ಸಂಪೂರ್ಣವಾಗಿ ಬೀರಿಲ್ಲ. ಭಾರತೀಯ ಸಂಸ್ಕೃತಿಯ ಬೆನ್ನುಮೂಳೆಯಾದ ಉಪನಿಷತ್ತು ಮತ್ತು ಪುರಾಣಗಳ ಉದಾತ್ತ ಪರಂಪರೆಯನ್ನು ಮನೆ ಮನೆಗಳಲ್ಲಿ ಹಾಡಿ ಮನವನ್ನು ಬೆಳಗಿಸುವ ಜಾನಪದ ಗೀತೆಗಳು ಕಾಯ್ದುಕೊಂಡು ಬಂದಿವೆ. ಈ ಜನಪದ ಹಾಡುಗಳು ಸರಳ, ಸುಂದರ. ಆದರೆ ಈ ಸರಳವಾದ ಶಬ್ದಗಳ ಹಿಂದೆ ಗಂಭೀರವಾದ ಅರ್ಥ ಹುದುಗಿದೆ, ಬದುಕಿನ ಸಾರ, ಉದ್ದೇಶಗಳ ಆಳವಾದ ವಿವರಣೆ ನುಡಿ ನುಡಿಯಲ್ಲಿ ಮಿಂಚಿದೆ. ವಿಖ್ಯಾತ ದಾರ್ಶನಿಕರು ನಿಬ್ಬೆರಗಾಗಿ ಬೆರಳು ಕಚ್ಚುವಂತಿದೆ ಈ ಸರಳ ಸಾಹಿತ್ಯ. ಈ ಹಳ್ಳಿಗರು ವಿಶ್ವವಿದ್ಯಾಲಯವನ್ನು ಕಂಡವರಲ್ಲ. ಆದರೆ ಇವೆಲ್ಲ ವುಗಳಿಗಿಂತಲೂ ಮಿಗಿಲಾದ ಅವರ ಜೀವನದ ಕಷ್ಟ, ಸಂಕಟ, ಸುಖಗಳ ಅಗ್ನಿಯಲ್ಲಿ ಮಿಂದು ಪವಿತ್ರವಾದ ಜ್ಞಾನ, ಅಂತಃಪ್ರೇರಣೆ(Intuition) ಭಗವಂತನ ಮೇಲಿರುವ ನಿಷ್ಕಪಟ ಭಕ್ತಿ ಸಾಧಾರಣ ಪಾಂಡಿತ್ಯವನ್ನು ಮೀರಿಸಿವೆ. ಶರಣರ ಈ ನುಡಿ ತುಂಬ ಮನೋವೇದ್ಯವಾಗಿದೆ

"ವೇದ ಶಾಸ್ತ್ರಾಗಮ ಪುರಾಣಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಂಬೊ, ಅವನು ಕುಟ್ಟಲೇಕೆ? ಅತ್ತಿತ್ತ ಹರಿವ ಮನದಶಿರ ವನರಿಯ ಬಲ್ಲಡೆ ಬಟ್ಟ ಬಯಲು ಚನ್ನಮಲ್ಲಿಕಾರ್ಜುನಾ." ದಿನದ ಕಠೋರ ಪರಿಶ್ರಮದ ನಂತರ ಸಂಜೆಯ ಪ್ರಶಾಂತ, ನಿಶ್ಶಬ್ದ ವಾತಾವರಣದಲ್ಲಿ ಗ್ರಾಮವಾಸಿಗಳು ಈ ಲೋಕಗೀತೆಗಳ ದಿವ್ಯಭಾವದಲ್ಲಿ ತನ್ಮಯರಾಗಿ ತೇಲುತ್ತಿದ್ದರು. ಧ್ಯಾನದಿಂದ ಸಾಧಕರು ಅನುಭವಿಸುವ ಉನ್ನತ ಮಾನಸಿಕ ಅವಸ್ಥೆಯನ್ನು ಈ ಸರಳ, ಮುಗ್ಧ ಹಳ್ಳಿಗರು ಅನುಭವಿಸುತ್ತಿದ್ದರು. ಇದಕ್ಕಾಗಿಯೇ ಸ್ವಾಮಿ ವಿವೇಕಾನಂದರು ನಮ್ಮ ಗ್ರಾಮವಾಸಿ ಧರ್ಮದ ವಿಷಯದಲ್ಲಿ ಪಶ್ಚಿಮದ ಶಿಕ್ಷಿತ ವ್ಯಕ್ತಿಗಿಂತಲೂ ಹೆಚ್ಚು ಜ್ಞಾನ ಸಂಪನ್ನರೆಂದು ಹೇಳಿದ್ದಾರೆ.

ನಮ್ಮ ಕರ್ನಾಟಕದ ಶರಣರು, ದಾಸರು ತಮ್ಮ ಅಪೂರ್ವ, ನಿರಾಡಂಬರ ವಚನಗಳಿಂದ ವಾತಾವರಣವನ್ನು ಚೇತನಗೊಳಿಸಿದ್ದಾರೆ. ಇದೇ ರೀತಿಯಾಗಿ ಬಂಗಾಲದಲ್ಲಿ ಬಾವುಲರೆಂಬ ಪ್ರಸಿದ್ಧರಾದ ತ್ಯಾಗಿಗಳ ಪರಂಪರೆಯಿದೆ. ಈ ಬಾವುಲರು ಕೇವಲ ಹಿಂದುಗಳು ಮಾತ್ರವಲ್ಲದೆ ಮುಸಲ್ಮಾನರೂ ಸಹ ಇದ್ದರು. ಇದು ಸೂಫಿ ಧರ್ಮದ ಪ್ರಭಾವ. ವಂಗ ಸಾಹಿತ್ಯವನ್ನು ಈ ಬಾಹುಲರ ಹಾಡುಗಳು ಶ್ರೀಮಂತಗೊಳಿಸಿವೆ ಅಲ್ಲದೆ ಜನಮನವನ್ನು ಸೂರೆಗೊಂಡಿವೆ. ಈ ಪಂಥದ ಅನುಯಾಯಿಗಳು ಹಳ್ಳಿಯಿಂದ ಹಳ್ಳಿಗೆ ಭಿಕ್ಷೆ ಬೇಡುತ್ತ ಪರಿವ್ರಾಜಕರಾಗಿ ತಿರುಗುತ್ತಿದ್ದರು. ಹಳ್ಳಿಯ ಸಮಾಜದಲ್ಲಿ ಇವರಿಗೆ ವಿಶೇಷ ಸನ್ಮಾನವಿತ್ತು. ಈಶ್ವರನ ಮಹಿಮೆ, ಕರುಣೆ, ಭಕ್ತಿ, ಪ್ರೇಮಗಳ ಮಹತ್ವ, ಜೀವನದ ಜಟಿಲ ಸಮಸ್ಯೆಗಳ ಪರಿಹಾರ, ನೋವು ಕಷ್ಟಗಳ ನೊಗದ ಭಾರವನ್ನು ಹಗುರಗೊಳಿಸುವ ಹಾಸ್ಯ ಇವೇ ಮೊದಲಾದವು ಈ ಗೀತೆಗಳ ಜೀವಾಳ. ದಾಸರ ಕೈಯಲ್ಲಿರುವ ತಂಬೂರಿಯಂತೆ ಇವರ ಕೈಯಲ್ಲಿಯೂ ಒಂದು ತಂತಿಯ ವಾದ್ಯವಿರುತ್ತಿತ್ತು. ಬಂಗಾಲಿಯಲ್ಲಿ ಇದಕ್ಕೆ ಏಕತಾರಾ ಎಂದು ಹೆಸರು. ಈ ಬಾವುಲರು

ನೃತ್ಯದಲ್ಲಿಯೂ ಪ್ರವೀಣರು. ಹಾಡುತ್ತ ಹಾಡುತ್ತಾ ತಾಳಕ್ಕನುಸಾರವಾಗಿ ನೃತ್ಯಮಾಡುತ್ತಿದ್ದರು. ಹಳ್ಳಿಗರು ಈ ಭಕ್ತಿಯ ಉಬ್ಬರದಲ್ಲಿ ಮೈಮರೆತು ನರ್ತಿಸುವುದನ್ನು ಇಂದಿಗೂ ಬಂಗಾಲದಲ್ಲಿ ನೋಡಬಹುದು. ಬಾವುಲರ ಲೋಕ ಗೀತೆಗಳಲ್ಲಿ 'ಪಟಠಾಕೂರ' 'ಧೂಯಾ' ಅಥವಾ 'ಶ್ಯಾಮಾ ಸಂಗೀತ' ಎಂಬ ಭೇದಗಳಿವೆ. ಈ ಶ್ಯಾಮಾ ಸಂಗೀತ ಬಹು ಪ್ರಸಿದ್ಧವಾಗಿದೆ. ವಿಖ್ಯಾತ ಸಂಗೀತಕಾರರು ಶ್ಯಾಮಾ ಸಂಗೀತವನ್ನು ಹಾಡುವದರಲ್ಲಿ ಹೆಮ್ಮೆ ಪಟ್ಟುಕೊಳ್ಳುತ್ತಾರೆ. 'ರವೀಂದ್ರ ಸಂಗೀತ' ಮತ್ತು ಶ್ಯಾಮಾಸಂಗೀತ ಇವೆರಡೂ ಈಗ ಬಹು ಜನಪ್ರಿಯವಾದ ಸಂಗೀತ ಮಾಧ್ಯಮಗಳು.

ರವೀಂದ್ರನಾಥ ಠಾಕೂರರನ್ನು ಈ ಬಾವುಲರ ಗೀತೆಗಳು ಬಹುವಾಗಿ ಆಕರ್ಷಿಸಿದ್ದವು. ಅವುಗಳ ಸಂಗ್ರಹ ಮತ್ತು ಪ್ರಸಾರದ ಕಾರ್ಯಗಳಲ್ಲಿ ಅವರು ವಿಶೇಷವಾಗಿ ಶ್ರಮಿಸಿದ್ದಾರೆ. ಅವುಗಳನ್ನು ಕುರಿತು ಅವರು — "ಬಾಹುಲ ಸಾಹಿತ್ಯ ಸಂಪತ್ತು ಹಿಂದುಗಳದ್ದಲ್ಲದೆ ಮುಸಲ್ಮಾನರದೂ ಸಹ. ಹಿಂದು ಮತ್ತು ಮುಸ್ಲಿಮ ಸಂಗಮ ಇದು. ಇಲ್ಲಿ ಒಬ್ಬ ಇನ್ನೊಬ್ಬನನ್ನು ಹಿಂಸಿಸುವುದಿಲ್ಲ. ಈ ಗೀತೆಗಳ ಭಾಷೆಯು ಚೌಕಟ್ಟು ನಯನಾಜೂಕುಗಳಿಗೆ ವ್ಯತಿರಿಕ್ತವಾದರೂ. ಅದು ಹೃದಯದ ತಂತಿಗಳನ್ನು ಮೀಟುತ್ತದೆ. ಈ ಪರಂಪರೆಯ ಸಂಗಮದಲ್ಲಿ ಒಂದು ಮನ ಇನ್ನೊಂದು ಮನದೊಂದಿಗೆ ಮಿಲನಗೊಳ್ಳುತ್ತದೆ. ಹಿಂದು, ಮುಸ್ಲಿಮ, ಬೌದ್ಧ, ವೈಷ್ಣವ, ಸೂಫಿ ಎಂಬ ವಿವಿಧ ಭೇದ ಆ ಮಿಲನಕ್ಕೆ ಅತಂಕವಾಗಲಾರದು." ಎಂದು ಹೇಳಿದ್ದಾರೆ.

ಬಾವುಲರ ಗೀತೆಗಳ ಬಗ್ಗೆ ನಮಗೆ ಪರಿಚಯ ಶ್ರೀ ಕೃಷ್ಣವಿಜಯ (೧೪ನೆಯ ಶತಮಾನ) ಚೈತನ್ಯ ಭಾಗವತ, (೧೬ನೆಯ ಶತಮಾನ) ಚೈತನ್ಯ ಚರಿತಾಮೃತ ಮೊದಲಾದ ಗ್ರಂಥಗಳಿಂದ ದೊರೆಯುತ್ತದೆ. 'ನಿನ್ನ ದೇವತ್ವ ನಿನ್ನಲ್ಲಿಯೇ ಹುದುಗಿದೆ. ನಿಜವಾದ ಮನುಷ್ಯ ನಿನ್ನ ಅಂತರಾಳದ ಗೋರಿಯಲ್ಲಿ ನಿದ್ರಿಸುತ್ತಿದ್ದಾನೆ. ನೀನು ಹೊರಗಡೆ ಅವನಿಗಾಗಿ ಎಷ್ಟು ಶೋಧಿಸಿದರೂ ಆ ಶೋಧನೆ ವಿಫಲ. ಪ್ರತಿಯೊಬ್ಬ ತನ್ನ 'ಮನೇರ ಮಾನುಷ' ಅಂದರೆ ತನ್ನತನವನ್ನು ಅಂತರಂಗದಲ್ಲಿ ಹುಡುಕಬೇಕು. 'ಮುಳುಗು, ಮುಳುಗು ಎಲೆ ಮಾನವ, ನಿನ್ನ ಅಂತರಂಗದಾಳಕೆ. ಇರುವದೆಲ್ಲವೂ ಒಳಗೆ. ಬಾಹ್ಯದಲಿ ನೀನು ಅರಸಿದಷ್ಟೂ ನಿನ್ನ ಶ್ರಮ ವ್ಯರ್ಥ.' ಇದು ಬಾಹುಲರ ಹಾಡುಗಳ ಮುಖ್ಯಪ್ರಣಾಲಿ. ಶರಣರ ವಚನಗಳನ್ನು ಈ ವಿಚಾರಧಾರೆಗೆ ಹೋಲಿಸಬಹುದು. "ನಿಮ್ಮಲ್ಲಿ ನೀವು ತಿಳಿದು ನೋಡಿದರೆ ಅನ್ಯವಿಲ್ಲ ಕಾಣಿರಣ್ಣಾ. ಅರಿವು ನಿಮ್ಮಲ್ಲಿಯೆ ತದ್ಗತವಾಗಿದೆ. ಅನ್ಯಭಾವವ ನೆನೆಯದೆ ತನ್ನೊಳಗೆ ತಾನೆ ಇರಬಲ್ಲರೆ ತನ್ನಲ್ಲಿಯೆ ತನ್ನಯ ಗುಹೇಶ್ವರಲಿಂಗವು" "ಎಲ್ಲ ಎಲ್ಲವನರಿದು ಫಲವೇನಯ್ಯ? ತನ್ನ ತಾನರಿಯಬೇಕಲ್ಲದೆ? ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೆ? ಚನ್ನಮಲ್ಲಿಕಾರ್ಜುನ, ನೀ- ಅರಿವಾಗಿ ಮುಂದುದೋರಿದ ಕಾರಣ ನಿಮ್ಮಿಂದಲರಿದೆನಯ್ಯಾ, ಪ್ರಭುವೇ." 'ಬಾವುಲ' ಶಬ್ದ ಸಂಸ್ಕೃತದ ವ್ಯಾಕುಲ ಶಬ್ದದಿಂದ ಬಂದಿದೆಯೆಂದು ಕೆಲವು ಪಂಡಿತರ ಮತ. ತನ್ನ ಪ್ರಿಯತಮ ಪ್ರಭುವಿನ ಮಿಲನಕ್ಕಾಗಿ ವ್ಯಾಕುಲನಾಗಿ, ತೀವ್ರ ಆಕಾಂಕ್ಷಿಯಾಗಿ ತಡೆಯಲಾರದೆ ಹೃದಯಸ್ಪರ್ಶಿಯಾಗಿ ಹಾಡುವ ವಿರಹಿಯೇ ಬಾವುಲ.

ಐತಿಹಾಸಿಕ ದೃಷ್ಟಿಯಿಂದ ಬಾವುಲ ಸಂಪ್ರದಾಯದ ಉಗಮ ೧೦-೧೧ನೆಯ ಶತಮಾನದಲ್ಲಿ ತಾಂತ್ರಿಕ ಬೌದ್ಧ ಮತಾನುಯಾಯಿಗಳೊಂದಿಗೆ ಅಥವಾ ನಾಥಪಂಥದೊಂದಿಗೆ ಆಯಿತೆಂದು ಹೇಳಬಹುದು. ವೈಷ್ಣವರ ಸಹಜಿಯ ಪಂಥ ಬಾವುಲರನ್ನು ಅನುಕರಿಸಿತು. ತರುವಾಯ ಆವಿರ್ಭವಿಸಿದ ಚೈತನ್ಯ ಮತ್ತು ಅವನ ಅನುಯಾಯಿಗಳು ಬಾವುಲರ ಗೀತೆಗಳನ್ನು ಬಹು ಉಚ್ಚಮಟ್ಟದ ವೈಷ್ಣವ ಸಂಕೀರ್ತನೆಯಲ್ಲಿ ಪರಿವರ್ತಿಸಿದರು. ಬಾವುಲರು, ವೈಷ್ಣವ ಮತವನ್ನು ಅವಲಂಬಿಸಿದರು. ಪದ್ಮಲೋಚನ ಗೋಸ್ವಾಮಿ, ಫಕಿರ ಪಂಚಶಾಹ, ಪಗಲಾ ಕನ್ಹಾಯಿ, ಗೌರಪ್ರಿಯಗೋಸಾಯಿ, ಬನಮಾಲಿ ಗೋಸಾಯಿ ಮೊದಲಾದವರು ಬಾವುಲಗೀತೆಯ ರಚನೆಯಲ್ಲಿ ಪ್ರಸಿದ್ಧರಾದವರು.

(26ನೇ ಪುಟ ನೋಡಿ)

# ವಿಧರ್ಮೀಯರಿಗೂ ಗಂಗಾ ವ್ಯಾಮೋಹ

—ಎನ್. ಎಸ್. ಗಡಗಕರ.

"ಸುಧಾ ಸೌಂದರ್ಯಂ ತೇ ಸಲಿಲಮಶಿವಂ ನಃ ಶಮಯತು"
(ಅಮೃತತ್ವವನ್ನು ಒದವಿಸುವ ಹೇ ಗಂಗೆ, ನಿನ್ನ ಉದಕವು ನನ್ನ ಪಾತಕಗಳನ್ನು ಹೋಗಲಾಡಿಸಲಿ)

ಗಂಗಾ ಜಲ ಸುಧೆಗಿಂತ ಹೆಚ್ಚು ರುಚಿ. ಜೇನಿಗಿಂತಲೂ ಹೆಚ್ಚು ಸವಿ. ಪರಿಶುದ್ಧತೆ, ರುಚಿ ಜಾಹ್ನವೀಜಲದ ವೈಶಿಷ್ಟ್ಯಗಳೇನೊ ನಿಜ. ಆದರೆ ಪುಷ್ಟಿ, ತುಷ್ಟಿ, ಆರೋಗ್ಯ ದಯಪಾಲಿಸುವ ಗುಣಗಳೂ ಅದಕ್ಕಿವೆ. ಅನಾದಿಕಾಲದಿಂದ ಹಿಂದೂಗಳು ಗಂಗಾ ಮಾತೆಯನ್ನು ಶ್ರದ್ಧೆಯಿಂದ ಪೂಜಿಸುತ್ತಾ ಬಂದಿರುವರು. ಅಲ್ಲಿ ಅಂಧವಿಶ್ವಾಸ, ಮೂಢ ಭಾವನೆಯಿಲ್ಲ. ಅಪ್ಪ ಕಟ್ಟಿಸಿದ ಬಾವಿಯೆಂದು ಅಲ್ಲಿಯ ಉಪ್ಪು ನೀರನ್ನೂ ಸದೈವ ಕುಡಿಯುವ ಮುಗ್ಧ ಶ್ರದ್ಧೆ ಇಲ್ಲಿ ಇಲ್ಲ. ಆದರೆ

"ಅಹೋ ನಿರ್ಲೋಭಾನಾಮಪಿ ಮನಸಿ ಲೋಭಂ ಜನಯತಾಂ
ಗುಣಾನಾಮೇವಾಯಂ ಮಧುರ ಪರಿಣಾಮೋ ರಸಮಯಃ"

(ಎಂತಹ ವಿರಕ್ತರಿಗೂ ಕೂಡ ಪುಕಪಡಾಸೆಯನ್ನು ಹುಟ್ಟಿಸುತ್ತಿರುವ ಆ ಸದ್ಗುಣಗಳೇ ನಿನಗೆ ರಸವಂತಿಕೆಯನ್ನುಂಟು ಮಾಡಿರುವುವು.) ಎಂಬ ಜಗನ್ನಾಥ ಪಂಡಿತನ ಪ್ರಶಂಸೆ ಅರ್ಥಪೂರ್ಣವಾದುದು. ಪ್ರಾಚೀನ ಕಾಲದ ಆರ್ಯರು ಗಂಗಾಜಲಕ್ಕೆ ವ್ಯರ್ಥ ಗೌರವ ಸಲ್ಲಿಸಲಿಲ್ಲ. ಅದರ ರೂಪ, ರಸ, ಮಹಿಮೆ, ರುಚಿ, ಶುಚಿ, ಮಾಧುರ್ಯ–ಎಲ್ಲ ದೃಷ್ಟಿಯಿಂದಲೂ ವಿಚಾರಿಸಿ ಭಕ್ತಿ ಭಾವ ಪುರಸ್ಸರತೆಯಿಂದ ಅದರ ಲೋಕಪ್ರಿಯತೆಯನ್ನು ಸಾರಿದರು. ಇನ್ನಿತರ ನದಿಗಳಲ್ಲಿ ಅವರಿಗೆ ಇಂತಹ ಸತ್ವ, ಸ್ವಾದ, ಪುಷ್ಟಿ, ಆರೋಗ್ಯ ಗುಣ ಹೊಳೆಯಲಿಲ್ಲ. ಸಹಸ್ರಾರು ವರ್ಷಗಳಿಂದಲೂ ನಮ್ಮ ಪೂರ್ವಜರು ಸಾರಾಸಾರ ವಿಚಾರಿಸಿ, ಚಿಕಿತ್ಸಕ ದೃಷ್ಟಿ ಮುಂದು ಮಾಡಿ ಆ ನದೀ ಜಲಕ್ಕೆ ಅಸದೃಶ ಮನ್ನಣೆ ಸಲ್ಲಿಸಿದರು.

"ಹಿಮವತ್ಪ್ರಭವಾಃ ಪಥ್ಯಾಃ ಪುಣ್ಯಾಃ ದೇವರ್ಷಿ ಸೇವಿತಾಃ" ಎಂಬ ಉದ್ಗಾರದಿಂದ ಗಂಗಾ ಜಲದ ಅಲೌಕಿಕತೆ ಹೆಚ್ಚಿರುವದು. ಹಿಮಾಲಯದಿಂದ ಹುಟ್ಟಿ ಬಂದುದರಿಂದ ಆರೋಗ್ಯ ಗುಣ ಅದಕ್ಕೆ ಉಂಟಾಗಿರುವದು, ಜೊತೆಗೆ ಮಂಗಲಮಯ. ದೇವಾನುದೇವತೆಗಳಿಗೂ ಪೂಜನೀಯ ಎನಿಸಿದೆ. ಹಿಮಾಲಯ ಪರ್ವತದಲ್ಲಿಯ ರತ್ನ, ಸುವರ್ಣ, ರಜತ, ತಾಮ್ರ-ಮುಂತಾದ ಲೋಹಗಳ ಸಂಪರ್ಕದಿಂದ ವಿಶಿಷ್ಟ ಸ್ವರೂಪ ಅದಕ್ಕೆ ಪ್ರಾಪ್ತವಾದುದು ಸಣ್ಣ ಮಾತಲ್ಲ. ಹಿಮಾಲಯದ ಮಣಿಮಯ ಪ್ರದೇಶದಲ್ಲಿ ಜಾಹ್ನವಿ ಹರಿಯುವದರಿಂದ ಆ ಜಲಕ್ಕೆ ಪಾಚಕ, ಪೋಷಕ, ಕ್ರಿಮಿನಾಶಕ ಶಕ್ತಿ, ಸತ್ವ ಗುಣಗಳು ಬಂದಿರುವುವು. ಅಂತೇ ಪಥ್ಯದ ಜೊತೆಗೆ ಪುಣ್ಯ!

ಮೇಲೆ ವಿವರಿಸಿದ ಚರಕಾಚಾರ್ಯರ ಅಭಿಪ್ರಾಯದಂತೆ, "ಅಷ್ಟಾಂಗ ಹೃದಯ" ಎಂಬ ತನ್ನ ಗ್ರಂಥದಲ್ಲಿ ವಾಗ್ಭಟನೂ ಕೂಡ ಗಂಗಾಜಲಕ್ಕೆ ಹಿಮಾಲಯದ ಗುಣಗಳ ಪ್ರಭಾವ ಉಂಟಾಗಿರುವುವು ಎಂದು ಉಸುರಿರುವನು. ಪುಣೆಯ ಭಂಡಾರಕರ ಸಂಶೋಧನಾ ಸಂಸ್ಥೆಯಲ್ಲಿ

"ಭೋಜನ ಕುತೂಹಲಂ" ಎಂಬ ಗ್ರಂಥ ಉಪಲಬ್ಧವಿರುವುದು. ಅಲ್ಲಿ ಸ್ವಾದ, ಶ್ವೇತ, ಸ್ವಚ್ಛತೆ, ಪಥ್ಯ ಪಾಚಕತೆ, ಪಾಪಹಾರಿ ಮುಂತಾದ ಗುಣಗಳು ಗಂಗಾ ಜಲದಲ್ಲಿ ಅಡಕವಾಗಿರುವುವೆಂದು ಸುಸ್ಫುಟವಾಗಿ ನಿವೇದಿಸಲಾಗಿದೆ. ಇಷ್ಟೊಂದು ಸದ್ಗುಣಗಳ ನೆಲೆವೀಡಾದ ಆ ನದಿಗೆ "ತೀರ್ಥರಾಜ" ಎಂಬ ಘನವಾದ ಗೌರವ ಸಂದಿದ್ದು ಅಯುಕ್ತವೇನಲ್ಲ.

ಆ ಮಹಿಮಾಯುತ ನದಿಯಲ್ಲಿಯ ಈ ಬಗೆಯ ಅಪೂರ್ವ ಲಕ್ಷಣಗಳನ್ನು ಲಕ್ಷಿಸಿಯೇ ನಮ್ಮ ಪ್ರಾಚೀನ ರಾಜಮಹಾರಾಜರೂ ತಮ್ಮ ರಾಜ್ಯಗಳ ವ್ಯಾಮೋಹ ತೊರೆದು ಗಂಗಾ ತಟವನ್ನು ಆಶ್ರಯಿಸುತ್ತಿದ್ದುದು ಮನನೀಯ ಸಂಗತಿ. ಅಂತೆಯೇ

ಅಪಿ ಪ್ರಾಜ್ಯಂ ರಾಜ್ಯಂ ತೃಣಮಿವ ಪರಿತ್ಯಜ್ಯ ಸಹಸಾ
ವಿಲೋಲದ್ವಾನೀರಂ ತವ ಜನನಿ
ತೀರಂ ಶ್ರಿತವತಾಮ್।
ಸುಧಾತಃ ಸ್ವಾದೀಯಃ ಸಲಿಲ
ಭರಮಾತೃಪ್ತಿ ಪಿಬತಾಂ।
ಜನಾನಾಮಾನಂದಃ ಪರಿಹಸತಿ
ನಿರ್ವಾಣ ಪದವೀಮ್॥

ಸಕಲಲೋಕದ ಪದವಿಯನ್ನು ಕೂಡ ಕೆಲ ಪುಣ್ಯಾತ್ಮರು ಹುಲ್ಲಿಗಿಂತ ಕಡೆಗಣಿಸಿ, ದೇವಿ, ನಿನ್ನ ತೀರದಲ್ಲಿಯ ವೃಕ್ಷಗಳ ಶೀತಲ ನೆರಳಿನಲ್ಲಿ ಸುಖ ಹೊಂದುವರು. ಆ ಅಮೃತ ಸದೃಶ ನಿನ್ನ ನೀರನ್ನು ಕುಡಿದು ತೃಪ್ತಿ ಹೊಂದುವರು. ನಿತ್ಯಾನಂದಪ್ರದವೆನಿಸಿದ ಮೋಕ್ಷವನ್ನು ಕೂಡ ಇವರು ತುಚ್ಛವಾಗಿ ಕಂಡಿರುವರು. ಗಂಗಾಜಲ ಅವರ ಕಣ್ಣಲ್ಲಿ ಅಮೃತಕ್ಕಿಂತಲೂ ಮಿಗಿಲು) ಎಂಬ ಉಕ್ತಿ ಭಾವಪೂರ್ಣ ಎನಿಸಿದೆ.

ಭಾರತೀಯರ ಆಚಾರ ವಿಚಾರಗಳನ್ನು ನಿಂದಿಸುತ್ತಿದ್ದ, ಅವರ ಪವಿತ್ರ ಗುಡಿ ಗುಂಡಾರಗಳನ್ನು ಧ್ವಂಸಗೊಳಿಸುವಲ್ಲಿ ವಿಶೇಷ ಆಸಕ್ತಿ ತೋರಿದ ಯವನರು ಗಂಗಾಸ್ನಾನ, ಗಂಗಾಪಾನಗಳಿಗೆ ಆಜನ್ಮ ಮನಸೋತಿದ್ದರು. ಅದು ಅವರಿಗೆ ವ್ರತವಾಗಿ ಪರಿಣಮಿಸಿದ್ದಿತು. ಆ ಮಹಾಮಹಿಮ ದೇವನದಿಯ ಬಗೆಗೆ ಅತ್ಯಾದರವಿತ್ತೆಂಬುದು ಇತಿಹಾಸದ ಅವಶೇಷಗಳ ಮೂಲಕ ಇಂದು ನಮಗೆ ಸ್ಫುಟವಾಗಿ ಕಂಡು ಬರುವುದು.

ದುರಂತ ವಿಕ್ರಮ, ಅತಿ ವಿಕ್ಷಿಪ್ತ ಪ್ರಕೃತಿಯವನೆಂದು ಇತಿಹಾಸದ ಪುಟ ಪುಟಗಳಲ್ಲಿಯೇ ಉಪಹಾಸಕ್ಕೀಡಾದ ಯವನರಾಜ ಮಹಮದ ತುಘಲಕನ ಬಗೆಗೆ ಇತ್ತಿತ್ತಲಾಗಿ ಸಂಶೋಧಕರು ಅನೇಕ ಸತ್ಯ ಸಂಗತಿಗಳನ್ನು ಬಯಲಿಗೆಳೆದಿರುವರು. ಅವನು ಅಪೂರ್ವ ರಾಜಕಾರಣಿ, ದಕ್ಷ ಆಡಳಿತಗಾರ ಬುದ್ಧಿವಂತ, ಅರ್ಥಶಾಸ್ತ್ರಜ್ಞನೆಂದು ತಿಳಿದು ಬಂದಿದೆ ಕಾಯಿದೆ ಕಾನೂನು ಕೋವಿದನೆಂದು ವಿದಿತವಾಗಿದೆ. ದುರ್ಗುಣಗಳೊಡನೆ ಅವನಲ್ಲಿ ಅಸಂಖ್ಯಾತ ಸದ್ಗುಣಗಳೂ ನೆಲಸಿದ್ದವೆಂಬುದು ತಿಳಿದು ಬಂದಿದೆ. ಅವನ ಸದ್ಗುಣಗಳಲ್ಲಿ ಗಂಗಾಜಲಪಾನ ವ್ಯಸನ ಒಂದು. ಆ ಮಹೋದಯನು ದೌಲತಾಬಾದಿನಲ್ಲಿದ್ದರೂ ದಿನಂಪ್ರತಿ ಕಾಶಿಯಿಂದ ಗಂಗಾಜಲ ತರಿಸುತ್ತಿದ್ದನಂತೆ ! ಅದಕ್ಕಾಗಿ ಅವನಿಗೆ ಅಪಾರ ದ್ರವ್ಯ ಹತ್ತಿರಬೇಕು. ಗಂಗಾಜಲ ಕಲಶ ಒಂದನ್ನು ದೌಲತಾಬಾದಿಗೆ ತರಲು ನಲವತ್ತು ದಿನ ಹತ್ತುತ್ತಿದ್ದವು ಆ ಕಾಲಕ್ಕೆ. ಇಂತಹ ಮಹಾಪ್ರಯಾಸದ ಕಾರ್ಯಕ್ರಮವನ್ನು ಆ ತುಘಲಕ್ ದೊರೆ ಆಮರಣ ಪರ್ಯಂತ ಇಟ್ಟುಕೊಂಡು ನಡೆಸಿದನಂತೆ.

ಅತ್ಯಂತ ಲೋಕಪ್ರಿಯ ಯವನ ಚಕ್ರವರ್ತಿ ಅಕ್ಬರನಿಗಾದರೂ ಗಂಗಾ ವ್ಯಾಮೋಹವು ಅತೀವ ಪ್ರಬಲವಾಗಿತ್ತು. ಅಬುಲ್ ಫಜಲ್ ಎಂಬ ದೊರೆಯ ಪಂಡಿತ ಮಿತ್ರನ 'ಆಯನ ಅಕಬರೀ' ಗ್ರಂಥದಲ್ಲಿ ಈ ವಿಷಯದ ಖಚಿತ ಉಲ್ಲೇಖಗಳು ಉಪಲಬ್ಧ ಇರುವವು. ಮಹಾರಾಜ ಬಾದಶಹನಿಗೆ ಅಮೃತಕ್ಕಿಂತಲೂ ಜಾಹ್ನವೀತೋಯ ಪ್ರಿಯ ಎನಿಸಿತ್ತಂತೆ. ಅಮೃತವು ಸ್ವರ್ಗೀಯವಾದುದರಿಂದ ಅದರ ರುಚಿ ಕೇಳಿಕೆಯದಂತೇನೋ ! ಅನುಭವಜನ್ಯ ಸ್ವಾದ ಅದರದಲ್ಲ !)

ನಲ್ಲಿ ಅರಸು ಭಾಗೀರಥೀ ನೀರಿನಿಂದ ಸ್ನಾನ ಪಾನ ಗೈಯ್ಯುತ್ತಿದ್ದನಂತೆ. ಆ ನೀರು ತನಗೆ ತಪ್ಪದೆ ದೊರೆಯಬೇಕೆಂಬ ಅಪೇಕ್ಷೆಯಿಂದ ಅದನ್ನು ಒದಗಿಸಲು ಅನೇಕರನ್ನು ನಿಯಮಿಸಿದ್ದನಂತೆ. ಕಾಶಿಯಿಂದ ದಿಹಲಿಯವರೆಗೆ ಅಲ್ಲಲ್ಲಿ ನೆಲಸಿದ ಆ 'ವಾರಿವಾಹಕ ಮಂಡಲಿ' ಸುವರ್ಣ ಕುಂಭಗಳಲ್ಲಿ ಗಂಗಾಜಲ ತಂದು ಇರಿಸುತ್ತಿತ್ತು. ದೊರೆಯು ಪ್ರವಾಸಕ್ಕೆ ಹೋದಾಗಲೂ, ಪರನಾಡಿನಲ್ಲಿ ಯುದ್ಧ ನಿರತನಾದಾಗಲೂ ಈ ಗಂಗಾಜಲ ಅವನಿಗೆ ದೊರೆಯದೇ ಇರುತ್ತಿರಲಿಲ್ಲ. ಅಂತಹ ಯುಕ್ತ ಯೋಜನೆ ಅವನದು! ಅಕಬರನು ಬೇರಾವ ನೀರನ್ನೂ ಬಳಸುತ್ತಿರಲಿಲ್ಲ. ಒಂದು ವೇಳೆ ಪರಸ್ಥಳದಲ್ಲಿ ಗಂಗಾಜಲ ಸಕಾಲಕ್ಕೆ ತಲುಪದಿದ್ದರೆ ಅಡುಗೆಗಾಗಿ ಯಮುನಾಜಲ ಬಳಸಲು ಒಪ್ಪಿಗೆ ಈಯುತ್ತಿದ್ದ. ಏನಿದ್ದರೂ ಆ ಗಂಗಾಜಲದ ಹಲವು ಕಣಗಳಾದರೂ ಆ ಸಾರ್ವಭೌಮನ ಬಳಕೆಯ ನೀರಿನಲ್ಲಿ ಇರಬೇಕಾದ ಕಟ್ಟಾಜ್ಞೆ ಇದ್ದಿತು. ಪ್ರಾಣವು ಕಂಠಗತವಾದಾಗಲೂ ಅವನು ಆ ಗಂಗಾಜಲದ ನಾಲ್ಕು ಹನಿ ಗುಟುಕರಿಸಿದ!

ಯವನರಾಜ ಔರಂಗಜೇಬನು—

"ಹಿಂದೂನಾಂ ಪ್ರಾಣಹಿಂಸಾರ್ಥಂ
ಮೂರ್ತೀನಾಂ ಭಂಜನಾಯಚ,
ಧರ್ಮವಿಧ್ವಂಸನಾರ್ಥಾಯ
ಸಂಭವಾಮಿ ಯುಗೇ ಯುಗೇ"

ಎಂದು ಪಣ ತೊಟ್ಟಿದ್ದನಂತೆ. ಇತಿಹಾಸ ಇದಕ್ಕೆ ಸಾಕ್ಷಿ. ಹಿಂದೂಗಳ ಚಿತ್ರಹಿಂಸೆ, ಅವರ ಸುಕುಮಾರ ಮೂರ್ತಿಗಳ, ಧರ್ಮದ ವಿಧ್ವಂಸನೆ—ಅವನ ಜೀವಿತದ ಪವಿತ್ರ (?) ಧ್ಯೇಯವಾಗಿತ್ತಂತೆ. ಸಾಕ್ಷಾತ್ ಕಲಿಯಾಗಿಯೇ ಆಗ ಅವತರಿಸಿದ ಅರಸಿಕ ಔರಂಗಜೇಬನಿಗೆ ಗಂಗಾ ವ್ಯಾಮೋಹವು ಅತಿ ತೀವ್ರತರದ್ದಾಗಿತ್ತು. ಕ್ರಿ. ಶ. ೧೬೫೮ ರಿಂದ ೧೬೬೭ ರವರೆಗೆ ಭಾರತದಲ್ಲಿ ಸಂಚರಿಸಿದ ಫಿರಂಗಿ ಪ್ರವಾಸಿ ಬಾರ್ನಿಯರ್ ಎಂಬುವನು ಔರಂಗಜೇಬನ ವಿಷಯವಾಗಿ ಅನೇಕ ಸೋಜಿಗದ ಸಂಗತಿಗಳನ್ನು ನಿವೇದಿಸಿರುವನು. ಯವನ ಚಕ್ರವರ್ತಿ ದಂಡ ಯಾತ್ರೆಗೆ ಹೊರಡುವಾಗ ತನ್ನ ಸಿದ್ಧತೆಯ ಕಾರ್ಯಕಲಾಪಗಳ ಜೊತೆಗೆ ಜಾಹ್ನವೀ ಜಲದ ಕಲಶ ತೆಗೆದಿಟ್ಟು ಒಯ್ಯಲು ಮರೆಯುತ್ತಿರಲಿಲ್ಲವಂತೆ. ಡಾ. ಬಿಸಂಗ್ ದರ್ಶ ಅವನು ಸ್ವತಃ ವಿಚಾರಣೆ ಮಾಡುತ್ತಿದ್ದ. ಅವನ ರಾಜಾಸ್ಥಾನದ ಸದಸ್ಯರಿಗೆ ಬಹುಶಃ ಈ ನೀರೇ ಪ್ರಿಯವಾಗಿರಬೇಕು. ಪ್ರಯಾಣ ಕಾಲದಲ್ಲಿ ಒಂಟೆಗಳ ಮೇಲೆ ಈ ನೀರಿನ ಕೊಡಗಳನ್ನು ಒಯ್ಯುತ್ತಿದ್ದರು. ಔರಂಗಜೇಬ ಮಹಾಶಯನ ಪ್ರಾತಃಕಾಲದ ಉಪಾಹಾರ ಈ ಜಲದಿಂದಲೇ ಆರಂಭ. ಅವನಿಗೆ ಅದು ಪ್ರಾಣಕ್ಕಿಂತಲೂ ಪ್ರಿಯಕರವಾಗಿತ್ತು.

ಭಾರತದ ಇನ್ನೂ ಅನೇಕ ನವಾಬರು, ಸಂಸ್ಥಾನಿಕರು ಸ್ನಾನ, ಪಾನಗಳಿಗಾಗಿ ಗಂಗಾ ಜಲವನ್ನೇ ಉಪಯೋಗಿಸುತ್ತಿದ್ದರೆಂದು ಫ್ರೆಂಚ್ ಪ್ರವಾಸಿ ಟ್ಯಾವ್ಹನಿಯರ್ ತಿಳಿಸಿರುವನು. ಪಾಶ್ಚಿಮಾತ್ಯ ಸೇನಾಪತಿ ಎಡ್ವರ್ಡ್ ಮೂರ್‌ನ ಲೇಖನದ ಮೇರೆಗೆ—ದಕ್ಷಿಣದ ಯವನ ದೊರೆಗಳು ತಮ್ಮ ಮನೆತನದ ವಿವಾಹಾದಿ ಮಹೋತ್ಸವಗಳಲ್ಲಿ ನೆರೆದ ಅತಿಥಿ ವೃಂದಕ್ಕೆ ಗಂಗಾಪಾನ ಮಾಡಿಸಲು ಮರೆಯುತ್ತಿರಲಿಲ್ಲವಂತೆ! ಅದು ಅವರ ದೃಷ್ಟಿಯಲ್ಲಿ ಅಷ್ಟು ಅಮೂಲ್ಯ, ಗೌರವಾಸ್ಪದ ಆಗಿತ್ತು. ಇಷ್ಟೊಂದು ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡಲು ಹಣ ಬಹಳ ವ್ಯಯವಾಗುತ್ತಿತ್ತು ನಿಜ. ಆದರೆ ಅದರಿಂದ ಅತಿಥಿಗಳು ಸಂತೃಪ್ತರಾಗುತ್ತಿದ್ದರು." ಆ ಮಾನದಿಂದ ಅರಸರು ಏನು ವೆಚ್ಚ ಮಾಡಿಯೂ ಕೃತಕೃತ್ಯರಾಗುತ್ತಿದ್ದರು. ಪೇಷ್ವೇ ಪ್ರಭೃತಿಗಳು ರಾಜಾಧಿರಾಜರಲ್ಲಿ ಸರ್ವಾಧಿಕಾರಕ್ಕೆ ಹೆಸರಾದವರು. ಅಂತಹರು ಪ್ರತಿ ದಿನ ಗಂಗಾಜಲವನ್ನು ಕಾಶಿಯಿಂದಲೇ ತರಿಸುತ್ತಿದ್ದುದು ಆಶ್ಚರ್ಯದ ಮಾತಲ್ಲ!

ಇದೀಗ ಗಂಗಾಜಲದ ಪಾವಿತ್ರ್ಯ, ಅಖಂಡ ಲೋಕಪ್ರಿಯತೆ ದಿನೇ ದಿನೇ ವ್ಯಾಪಕವಾಗುತ್ತಿದೆ.

—

(ವಿವಿಧ ಮೂಲಗಳಿಂದ)

---

ಕನ್ನಡ ಸೂಕ್ತಿ ಸಂಹಿತೆ
ದೈವವೇ ಮೇಲೆಂದು ಯೋಚಿಸಿ
ತನ್ನ ಯತ್ನವಬಿಡದಿರು
—ಅ ರಂ. ಸಾವದ.

ಜಾನಪದ ಜೇನು

# 'ಮುಗಿಲೀಗೆ ಬಾಯಿ ತೆರೆದಾಳ'

—ಎಚ್. ಎಸ್. ಸಿದ್ಧಗಂಗಪ್ಪ.

---

ಜನಪದ ಸಾಹಿತ್ಯದಲ್ಲಿ ಮಾತೃ ಹೃದಯವನ್ನು ಜನಪದ ಕವಿಗಳು ಸರಳವಾಗಿ ಸಹಜವಾಗಿ ನಿರೂಪಿಸಿದ್ದಾರೆ. ಆಕೆ ಸಹನೆ, ಪ್ರೀತಿ, ಪ್ರೇಮ ವಾತ್ಸಲ್ಯದ ಪುತ್ಥಳಿ. ಹೆಣ್ಣಿಗೆ ಜೀವನದಲ್ಲಿ ಎರಡು ಸ್ಮರಣೀಯ ಘಟನೆಗಳು. ಒಂದು ಗೃಹಿಣಿಯಾಗುವುದು; ಮತ್ತೊಂದು ತಾಯಿಯಾಗುವುದು. ಹೆಣ್ಣು ಮದುವೆಯಾಗಿ ಕೈಹಿಡಿದ ಗಂಡನ ಮನೆಯನ್ನು ಬೆಳಗಲು ಬಂದಿದ್ದಾಳೆ. ಅಕ್ಕ ಪಕ್ಕದ ಮನೆಯ ಮಕ್ಕಳನ್ನು ಕಂಡಾಗ ತಾನು ಆದಷ್ಟು ಬೇಗ ತಾಯಿಯಾಗಬೇಕೆಂಬ ಬಯಕೆ ದಿನಗಳೆದಂತೆ ನೂರ್ಮಡಿಯಾಗಿದೆ. ತನ್ನ ಮನದ ಅಳಲನ್ನು ಶಿವನಲ್ಲಿ ತೋಡಿಕೊಂಡಿದ್ದಾಳೆ. 'ಮಕ್ಕಳ ಕೊಡು ಶಿವನೆ ಬಂಧಾನ ಪಡಲಾರೆ' ಎಂದು ಬೇಡಿಕೊಂಡಿದ್ದಾಳೆ. ಅವಳ ಕೋರಿಕೆ ಶಿವನಿಗೆ ಮುಟ್ಟಿತೋ ಎಂಬಂತೆ ಗರ್ಭವತಿಯಾಗಿದ್ದಾಳೆ. ಗರ್ಭದಲ್ಲಿ ಭ್ರೂಣವಾಗಿರುವಾಗಲೇ ತನ್ನ ಕರುಳ ಕುಡಿಯ ಬಗ್ಗೆ ಆಸಕ್ತಿ, ಬೆಳೆಯುತ್ತಿರುವ ವಂಶದ ಕುಡಿಯ ಬಗ್ಗೆ ಅಭಿಮಾನ. ಕಂದನಿಗೆ ಎಲ್ಲಿ ತೊಂದರೆಯಾಗುವುದೋ ಎಂದು ಉಪಯೋಗಿಸುವ ಆಹಾರದಲ್ಲಿಯೂ ಎಚ್ಚರ. ಹೀಗೆ ಒಂಭತ್ತು ತಿಂಗಳು ಬಸಿರ ಹೊತ್ತು ನೋವಿನಲ್ಲಿ ನಲಿವ ಕಂಡು ಮಗುವನ್ನು ಹಡೆದಿದ್ದಾಳೆ. ಮಗುವಿನ ಮುದ್ದು ಮುಖವನ್ನು ಕಂಡಾಗ ಅವಳಿಗಾದ ಆನಂದ ಅವರ್ಣನೀಯ. ಅವಳಿಗೆ ಒಂದು ಮಗುವಿನಿಂದ ತೃಪ್ತಿಯಿಲ್ಲ. "ಬಯಸಾಳ ನೂರೊಂದು ಫಲವ ಕೊಡು ಶಿವನೆ." ಎಂದು ಶಿವನನ್ನು ಭಕ್ತಿಯಿಂದ ಯಾಚಿಸುವುದನ್ನು ಕಂಡಾಗ ಅವಳ ಮಾತೃ ಹೃದಯದ ಪರಿಚಯವಾಗುತ್ತದೆ.

ಮಾತೆಯ ಮಮತೆಯ ಮಡಿಲಲ್ಲಿ ಮಗು ಬೆಳೆಯುತ್ತಿದೆ. ಮಾತು ಬಾರದ ಮಗು ಅರ್ಥ ಮಾಡಿಕೊಳ್ಳುವುದು ತುಂಬ ಕಷ್ಟ. ಹಸಿವಾದಾಗ, ಮತ್ತೇನಾದರೂ ತೊಂದರೆಯಾದಾಗ ಅಳುವಿನ ಮೂಲಕ ವ್ಯಕ್ತಗೊಳಿಸುತ್ತದೆ. ಗಂಡ ಮುಂಗೋಳಿ ಕೂಗುವ ಮುನ್ನವೇ ಹೊಲಕ್ಕೆ ಹೋಗಿ ಕೆಲಸದಲ್ಲಿ ತೊಡಗಿದ್ದಾನೆ. ಬಿಸಿಲು ಜಾಸ್ತಿಯಾಗಿದೆ. ಬರಿ ಹೊಟ್ಟೆಯಲ್ಲಿ ಕೆಲಸಕ್ಕೆ ಹೋದ ಪತಿಗೆ ಬೇಗ ರೊಟ್ಟಿ ಮಾಡಿಕೊಟ್ಟು ಬರಬೇಕೆಂದು ಅಣಿಯಾಗುತ್ತಿದ್ದಾಳೆ. ಆದರೆ ಏಕೋ ಏನೋ ಬೆಳಗಿನಿಂದಲೂ ಮಗು ಒಂದೇ ಸಮನೆ ರಚ್ಚೆಮಾಡುತ್ತಿದೆ. ಕಂದನ ಅಳುವಿನ ದನಿ ಮಾತೃ ಹೃದಯಕ್ಕೆ ತಾಕಿದೆ. ರೊಟ್ಟಿ ಮಾಡುವುದನ್ನು ಬಿಟ್ಟು ಮಗುವಿನ ಆರೈಕೆಯಲ್ಲಿ ತೊಡಗಿದ್ದಾಳೆ. ಕಂದನ ಅಳುವಿನಲ್ಲಿಯೂ ಸೌಂದರ್ಯ ಕಂಡಿದ್ದಾಳೆ; ಸುಖ-ಸಂತೋಷವನ್ನು ಅನುಭವಿಸಿದ್ದಾಳೆ. ಕಂದನನ್ನು ಅಪ್ಪಿ, ಮುದ್ದಿಸಿ, ಚುಂಬಿಸಿ ಆರೈಕೆ ಮಾಡುವ ಮಾತೃ ಹೃದಯ ತಣಿದಿದೆ. ಸಂತೋಷದಲ್ಲಿ ಮೈಮ ರೆತ ಅವಳು

ಅತ್ತರೆ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನಿಗೆಲಸ। ಕಂದನಂಥ
ಮಕ್ಕಳಿರಲವ್ವ ಮನಿ ತುಂಬ

ಎಂದು ಹೃದಯತುಂಬಿ ಹಾಡಿದ್ದಾಳೆ.

ಮಗು ಮನೆಯನ್ನು, ಮನವನ್ನು ಅಷ್ಟೇ ಏಕೆ ವಂಶವನ್ನೇ ಬೆಳಗುವ ನಂದಾದೀಪ. ಸಾಮರಸ್ಯ ದಾಂಪತ್ಯ ಜೀವನದ ಕೊಡುಗೆ. ಬೆಳಗಿನಿಂದ ಹೊಲದಲ್ಲಿ ಕೆಲಸ ಮಾಡಿಬಂದ ಅವರು ವಿಶ್ರಾಂತಿಯನ್ನು ಬಯಸುತ್ತಾರೆ. ಮನರಂಜನೆಯನ್ನು ಬಯಸುತ್ತಾರೆ. ಆದರೆ ಅವರಿಗೆ ನಗರದ ನಾಗರಿಕರಿಗಿರುವಂತೆ ಆಧುನಿಕ ಸೌಲಭ್ಯಗಳಿರಲಿಲ್ಲ. ಆದರೆ ಮುದ್ದು ಮಗುವಿನ ಮುಖವನ್ನು, ಬಾಲಲೀಲೆಯನ್ನು ಕಂಡಾಗ ಅವರ ಶ್ರಮ ಪರಿಹಾರವಾಗುತ್ತದೆ. ಮನಕ್ಕೆ ಆಹ್ಲಾದವಾಗುತ್ತದೆ. ಹಿಗ್ಗಿನಿಂದ —

ಕೂಸು ಇದ್ದ ಮನಿಗೆ ಬೀಸಣಿಗೆ ಯಾತಕ
ಕೂಸು ಕಂದವ್ಮ ಒಳಹೊರಗೆ । ಆಡಿದರ
ಬೀಸಣಿಕೆ ಗಾಳಿ ಸುಳಿದಾವ॥

ಎಂದು ಹಾಡಿದ್ದಾರೆ. ಎಂಥ ಸುಂದರ ಚಿತ್ರಣ. ಮಗು ಅಂಬೆಗಾಲಿಕ್ಕಿ ತೂಗುತ್ತ ಬರುವ ದೃಶ್ಯವನ್ನು ಬೀಸಣಿಗೆಗೆ ಹೋಲಿಸಿರುವುದು ಅವರ ಕಲ್ಪನಾ ಶ್ರೀಮಂತಿಕೆಯ ದ್ಯೋತಕ. ಮಗು ಅಂಬೆಗಾಲಿಡುತ್ತಾ ಮನೆ ತುಂಬ ಓಡಾಡುವ ಚಿತ್ರ ಕಣ್ಣಿಗೆ ಕಟ್ಟಿದಂತಿದೆ.

ಮಗು ಬೆಳೆದು ಓಡಾಡುವಂತಾಗಿದೆ. ಮನೆಯಲ್ಲಿ ಒಂದು ಘಳಿಗೆಯೂ ಇರುವುದಿಲ್ಲ. ಸದಾ ಅದರ ಮನಸ್ಸು ಆಟದ ಮೇಲೆ. ಆಗತಾನೆ ಸ್ನಾನ ಮಾಡಿಸಿ ಒಗೆದ ಬಟ್ಟೆಗಳನ್ನು ಹಾಕಿ ಮನೆಗೆಲಸದಲ್ಲಿ ತೊಡಗಿದ್ದಾಳೆ. ಮಗು ಬೀದಿಯಲ್ಲಿ ಮಣ್ಣಲ್ಲಿ ಆಡುತ್ತಾ ಇದೆ. ತಲೆ ತುಂಬ ಮಣ್ಣು. ಬಟ್ಟೆಯಲ್ಲ ಕೊಳೆಯಾಗಿದೆ. ಇಷ್ಟಾದರೂ ತಾಯಿಗೆ ತನ್ನ ಕಂದನ ಮೇಲೆ ಕೋಪವಿಲ್ಲ. ತಲೆ ಬಾಗಿಲಲ್ಲಿ ನಿಂತು ಓರಗೆಯವರೊಂದಿಗೆ ಆಟವಾಡುವುದನ್ನು ಕಂಡಾಗ ತೃಪ್ತಿ, ಸಂತೋಷ.

ಆಡಿ ಬಾ ನನ ಕಂದ ಅಂಗಾಲು ತೊಳೆದೇನ
ತೆಂಗೀನ ಕಾಯಿ ತಿಳಿನೀರ । ತಕ್ಕೊಂಡು
ಬಂಗಾರ ಮೋರಿ ತೊಳೆದೇನ॥

ಎನ್ನುವ ಅವಳಿಗೆ ತೆಂಗಿನಕಾಯ ತಿಳಿನೀರಿನಿಂದ ಮಗುವಿನ ಮುಖವನ್ನು ತೊಳೆಯಲು ಸಾಧ್ಯವಾಗದಿರಬಹುದು. ಬಡತನದಲ್ಲಿಯೂ ಶ್ರೀಮಂತಿಕೆಯನ್ನು ಕಾಣುವ ಅವಳ ಹೃದಯ ವೈಶಾಲ್ಯ ಮೆಚ್ಚುವಂತಹದು.

ಮಗು ಒಂದೇ ಸಮನೆ ರಚ್ಚೆ ಮಾಡಿದರೆ ತಾಯಿಗೆ ಕಳವಳ. ಸ್ವಲ್ಪ ನೆಗಡಿಯಾದರೂ ಸಾಕು ಕರುಳು ಮಿಡಿಯುತ್ತದೆ. ಮನೆಗೆಲಸದಲ್ಲಿ ತೊಡಗಿದ್ದರೂ ಗಮನವೆಲ್ಲ ಮಗುವಿನ ಕಡೆಗೆ. ಕಂದ ನಡೆದರೆ ಓಡಾಡಿದರೆ ಎಲ್ಲಿ ನೋವಾಗುವುದೋ ಎಂಬ ಆತಂಕ. ತೊಟ್ಟಿಲೊಳಗಿನ ಕಂದನನ್ನು ಕುರಿತು

ತೊಟ್ಟಿಲೊಳಗಿನ ಕಂದ ತೋಳ
ಬೀಸುವ ಚಂದ
ರಟ್ಟೆ ನೊಂದಾವು ಎಲೆ ಕಂದಾ । ನಿಮ್ಮವ್ವ
ದೃಷ್ಟಿ ತಗಿಯಾಕ ಅರಿಯಾಳು॥

ತನ್ನ ಕಂದನ ಬಗ್ಗೆ ಅದೆಷ್ಟು ಪ್ರೀತಿ, ಮಮತೆ! ಬಹುಶಃ ವ್ಯಕ್ತಿಗೆ ತಾಯಿಗಿಂತ ಪ್ರೀತಿಯಾದ ವಸ್ತು ಇನ್ನೊಂದು ದೊರೆಯಲಾರದು.

ಕಾಲಚಕ್ರ ಉರುಳಿದೆ. ಮಗ ಬೆಳೆದು ದೊಡ್ಡವನಾಗಿದ್ದಾನೆ. ಆದಷ್ಟು ಬೇಗ ಸೊಸೆಯನ್ನು ಮನೆದುಂಬಿಸಿಕೊಂಡು ಮೊಮ್ಮಕ್ಕಳನ್ನು ಎತ್ತಿ ಮುದ್ದಾಡುವ ಬಯಕೆ ತಾಯಿಗೆ. ಸಂಸಾರಿ ಮನೆಯೊಂದರಿಂದ ಹೆಣ್ಣನ್ನು ನೋಡಿ ಮಗನಿಗೆ ಮದುವೆ ಮಾಡಿ ಸೊಸೆಯನ್ನು ಮನೆಗೆ ಕರೆತಂದುದೂ ಆಗಿದೆ. ಸಂಸಾರದ ಜವಾಬ್ದಾರಿಯನ್ನು ಸೊಸೆಗೆ ವಹಿಸಿ ದೇವರನಾಮ ಸ್ಮರಣೆಯಲ್ಲಿ ಕಾಲವನ್ನು ಕಳೆಯ ಬೇಕೆಂದುಕೊಂಡಿದ್ದಾಳೆ. ವಯಸ್ಸಾಗಿದೆ. ಹಲ್ಲುಗಳು ಬಿದ್ದಿವೆ. ಜೀವನದಲ್ಲಿ ಎಲ್ಲವನ್ನೂ ಅನುಭವಿಸಿದ್ದಾಳೆ. ಅವಳಿಗಿರುವ ಕೊನೆಯ ಆಸೆ ಮೊಮ್ಮಕ್ಕಳನ್ನು ಆಡಿಸಿ

ಸಂತೋಷ ಪಡುವುದು. ಆದರೆ 'ತಾನೊಂದು ಬಗೆದರೆ ದೈವ ತಾನೊಂದು ಬಗೆಯಿತು' ಎಂಬಂತಾಯಿತು. ಅವಳ ಇಳಿಯ ವಯಸ್ಸಿನ ಜೀವನ. ಸೊಸೆ ದಿನೇ ದಿನೇ ಅಧಿಕಾರ ಚಲಾಯಿಸಲಾರಂಭಿಸುತ್ತಾಳೆ. ಅತ್ತೆ ಅವಳ ದೃಷ್ಟಿಯಲ್ಲಿ ಒಂದು ಮುದಿಗೂಬೆ ಇದ್ದ ಹಾಗೆ. ಸೊಸೆಯ ವರ್ತನೆಯನ್ನು ಸಹಿಸಲಾರದೆ ತಾನು ಹೆತ್ತು ಹೊತ್ತು ಸಾಕಿ, ಮುಪ್ಪಾದಾಗ ಜೋಪಾನವಾಗಿ, ತಾನು ಸಾಕಿದಂತೆಯೇ ತನ್ನನ್ನೂ ನೋಡಿಕೊಳ್ಳುತ್ತಾನೆ ಎಂಬ ನಂಬಿಕೆಯಿಂದ ಕಾಣುತ್ತಿದ್ದ ಮಗನಿಗೆ ಸೊಸೆಯ ಅಸಭ್ಯ ವರ್ತನೆಯನ್ನು ತಿಳಿಸುತ್ತಾಳೆ. ಆಗ ಕಂಡೂ ಕಾಣದಂತೆ ಕೇಳಿಯೂ ಕೇಳದಂತೆ ಇರುವ ಮಗನ ವರ್ತನೆಯನ್ನು ಕಂಡಾಗ ತಾಯಿಯ ಹೃದಯ ಭಾರವಾಗುತ್ತದೆ.

> ತಾವು ನನಕಂದಯ್ಯ ಕರಿ ಕಬ್ಬ ಹಚ್ಚನ
> ಮಲ್ಲಾಡ ದೇಶ ಗಿಣಿ ಬಂದು। ಮೆಯ್ದಾವ
> ಕಬ್ಬ ನಿನ ಸುಂಕ ರವದೀಯ॥

ಸುಂದರವಾದ ಅಭಿವ್ಯಕ್ತಿ. ನೋವಿದೆ. ಕಿರಿದರಲ್ಲಿ ಹಿರಿದಾದ ಅರ್ಥವಿದೆ. ತನ್ನ ಬಾಳನ್ನು ಬಂಗಾರವನ್ನಾಗಿಸಿ ಗೃಹಿಣಿಯಾಗಿ ನೆಮ್ಮದಿಯಾಗಿ ಬಾಳಲು ಅವಕಾಶ ಮಾಡಿಕೊಟ್ಟವರ ಮೇಲೆಯೇ ತಿರುಗಿ ಬಿದ್ದಿದ್ದಾಳೆ. ಆಕೆಗೆ ಗತ ಜೀವನದ ನೆನಪು ಮರುಕಳಿಸಿದೆ ದುಃಖ ಒತ್ತರಿಸಿ ಬಂದಿದೆ. ಕಣ್ಣೀರ ಕಟ್ಟೆ ಒಡೆದಿದೆ.

> ಮಗ ನಿನ್ನ ಹಡಿಲಾಕ ಮುಗಿಲ ಮುಟ್ಟಿತು ಜೀವ
> ಮದನಾರಿ ನನ್ನ ಸೊಸಿ ಬಂದು। ನಡೆವಾಗ
> ಮಗ ನಿನ್ನ ಮನಸು ಎರಡಾಗಿ॥

ಕಂಡ ದೇವರಿಗೆ ಕೈಮುಗಿದು ಹರಕೆ ಹೊತ್ತು ಮಗನನ್ನು ಪಡೆದು ಪ್ರೀತಿ ವಾತ್ಸಲ್ಯವನ್ನು ಧಾರೆ ಎರೆದು ಜೋಪಾನವಾಗಿ ಸಾಕಿದುದನ್ನು ಮಗ ಮರೆತು ಹೆಂಡತಿಯ ಕೈಗೊಂಬೆಯಾಗಿದ್ದಾನೆ. ಇಷ್ಟಾದರೂ ಮಗನ ಬಗ್ಗೆ ಕನಿಕರವಿದೆ; ಪ್ರೀತಿಯಿದೆ. ತನಗೆ ನೋವಾದರೂ ಮಗನು ಚೆನ್ನಾಗಿರಲಿ ಎಂದು ಹರಸಿ ಆಶೀರ್ವದಿಸಿದ್ದಾಳೆ. ಅದೆಂಥ ತ್ಯಾಗ ಗುಣ! ಮಗನಾದರೂ ತಾಯಿಯ ಪ್ರೀತಿ, ವಾತ್ಸಲ್ಯವನ್ನು ಅರ್ಥ ಮಾಡಿಕೊಳ್ಳಬಹುದಾಗಿತ್ತು. ಏಳೇಳು ಜನ್ಮವೆತ್ತಿದರೂ ತಾಯಿಯ ಋಣವನ್ನು ತೀರಿಸಲಾಗುವುದಿಲ್ಲವಂತೆ. ಅಷ್ಟೊಂದು ಭಾರವನ್ನು ಹೊರಿಸಿದ್ದಾಳೆ ತಾಯಿ. ಅದಾವುದನ್ನೂ ಗಣನೆಗೆ ತಾರದೆ ವಿವೇಕಶೂನ್ಯವಾಗಿ ವರ್ತಿಸಿದ್ದಾನೆ. ತಾಯಿಯಾದರೂ ಬಯಸಿದ್ದೇನು? ಸುಖದ ಸುಪ್ಪತ್ತಿಗೆಯನ್ನಲ್ಲ. ಮಗನ ಪ್ರೀತಿಯನ್ನು, ಸೊಸೆಯ ಸಚ್ಚಾರಿತ್ರ್ಯವನ್ನು. ಅವಳೆಂದೂ ಅವರ ದಾಂಪತ್ಯಜೀವನಕ್ಕೆ ಅಡ್ಡಬಂದವಳಲ್ಲ. ಆಕೆಯ ಮುಗಿಲೆತ್ತರದ ಆಸೆಗೋಪುರ ಬಿರುಗಾಳಿಗೆ ಸಿಕ್ಕಿ ನುಚ್ಚುನೂರಾಗಿದೆ. ಹೆಣ್ಣು ಬಾಲ್ಯದಲ್ಲಿ ತಂದೆ-ತಾಯಿಗಳ ಆಶ್ರಯದಲ್ಲಿ, ಯೌವನದಲ್ಲಿ ಗಂಡನ ಆಶ್ರಯದಲ್ಲಿ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿ ಇರಬೇಕಂತೆ. ಬೇಲಿಯೇ ಎದ್ದು ಹೊಲ ಮೇಯ್ದಂತಾಗಿದೆ. ಅವಳ ಗೋಳು ಮುಗಿಲು ಮುಟ್ಟಿದೆ. ಶಿವನಿಗೆ ತನ್ನ ಮನದ ದುಃಖವನ್ನು ತೋಡಿಕೊಂಡಿದ್ದಾಳೆ. ಅವಳ ದುರಂತ ಜೀವನವನ್ನು ನಮ್ಮ ಜನಪದ ಕವಿಗಳು ಸರಳವಾಗಿ ಸಹಜವಾಗಿ ಕರುಳು ಮಿಡಿಯುವಂತೆ ಅಭಿವ್ಯಕ್ತಿಗೊಳಿಸಿದ್ದಾರೆ.

> ಸೊಸೆಯು ಬರತಾಳಂತ ಖುಶಿ ಭಾಳ ಮನದಾಗ
> ಸೊಸಿ ಬಂದು ಮಗನ ಕಸಿಕೊಂಡು। ಬಾಳ್ವಾಗ
> ಮುಗಿಲೀಗೆ ಬಾಯಿ ತೆರೆದಾಳ॥ —

---

## ಕನ್ನಡ ಸೂಕ್ತಿ ಸಂಹಿತೆ

### ಯುಕ್ತಿಯ ಮಾತು

ಮಗು ಹೇಳಿದ್ದರೂ ಗಿಳಿ ನುಡಿದಿದ್ದರೂ
ಯುಕ್ತಿಯ ಮಾತನು ಸ್ವೀಕರಿಸು.

—ಅಮ್ಮೆಂಬಳ ಶಂಕರ ನಾರಾಯಣ ನಾವಡ.



# ಅನ್ನ ದಾತನಿಗೆ

—ಸದಾನಂದ ಹೋಳಿಕಟಿ

ಇಷ್ಟು ದಿನವು ಕಷ್ಟಪಟ್ಟು
ಉಳುಮೆಗೈದ ನೆಲದಲಿ;
ಬರದುಬಿಡೂ ನಿನ್ನ ಹೆಸರ
ನನ್ನದೆಂಬ ಛಲದಲಿ

ನೀನು ಉತ್ತಿ ಬಿತ್ತಿ ಬೆಳೆದ
ಭೂಮಿಯೆಲ್ಲ ನಿನ್ನದು;
ಯಾವ ಶಕ್ತಿ, ಕುಹಕಯುಕ್ತಿ
ನಿನ್ನನೇನು ಮಾಡದು.

ತೆರೆಯಿತಿನ್ನು ಚಿಂತೆ ಬಿಡೂ–
ನಿನ್ನ ಭಾಗ್ಯಬಾಗಿಲ;
ಬಾಳಗೀತೆ ಬರೆದುದಾಯ್ತು
ನಿನ್ನ ಕೈಯ ನೇಗಿಲ

ನಿನ್ನ ಬಾಳ ಬಾನಿನಲ್ಲಿ
ಮೂಡಿಬಂದ ಭಾಸ್ಕರ;
ಜಗಕೆ ಅನ್ನ ಕೊಡುವ ನಿನ್ನ
ಬಾಳನೇಳ್ಗೆಗೋಸ್ಕರ

ಮಣ್ಣಿನಲ್ಲಿ ಹೊನ್ನಬೆಳೆದು
ಜಗಕೆ ಅನ್ನ ನೀಡುವೆ;

ಸುಗ್ಗಿ ಬಂದರಾಯ್ತು ನೀನು
ಹಿಗ್ಗಿನಿಂದ ಹಾಡುವೆ

'ಉಳುವವನೇ ಭೂಮಿಯೊಡೆಯ'
ಎಂಬ ಧೀರ ಘೋಷಣೆ;

ಮೂಡಿ ನಿನ್ನ ಪೋಡುದಾಯ್ತು
ಇನ್ನದೆಲ್ಲಿ ಶೋಷಣೆ.

ಸಣ್ಣ ರೈತರನ್ನು ಸುಲಿದು–
ತಿನುವ ಗೇಣಿ ಪದ್ಧತಿ;
ಅಂತು ಇಂತು ಕೊನೆಯಗೊಂಡು
ಹೊಂದಿ ಹೋಯ್ತು ರದ್ಧತಿ

ದೀನದಲಿತರೆಂಬ ಕೀಳು–
ತಾರತಮ್ಯ ಅಳಿಸಲು;
ದಿಟ್ಟ ಹೆಜ್ಜೆ ಇಟ್ಟುದಾಯ್ತು
ಭಾವೈಕ್ಯತೆ ನೆಲೆಸಲು

ಉಳುವಾತನನುಳಿಸಲೆಂದು
ಬಂತು ಭೂಸುಧಾರಣೆ;
ತಡೆಯು ಇರದೆ ನಡೆವುದಿನ್ನು–
ದಾರಿದ್ರ್ಯದ ನಿವಾರಣೆ.

ಏನು ಎಂಥ ಶಕ್ತಿವಂಥ
ನಮ್ಮ ಅನ್ನದಾತನು;
ನೂರು ವರ್ಷ ಬಾಳು ಎನುವ
ಅವನೆ, ಲೋಕನಾಥನು. —

# ಧರೆಗಿಳಿದು ಬಾ ಅಕ್ಕ

ಬಾ ತಾಯಿ ಅಕ್ಕ; ನೀ ಧರೆಗಿಳಿದು ಬಾ
ವಿಶ್ವಕುಲಕೆ, ವಿಶ್ವನೆಲಕೆ, ವೀರಶೈವ
ಧರ್ಮಕೆ, ಕೀರ್ತಿ ಕಳಸವು ನೀನು.
ಮನು ಕುಲಕೋಟಿಯ ಅಕ್ಕ ನೀನು.
ಶ್ರೀ ಶೈಲ ಮಲ್ಲಿಕಾರ್ಜುನನೇ
ಗಂಡನೆಂದು, ಲಿಂಗದಲಿ ಲಿಂಗವಾಗಿ
ಕಷ್ಟಗಳೆಂಬ ಕಲ್ಲುಗಳನೆಡವಿ
'ಬೆಟ್ಟದ ಮೇಲೊಂದು ಮನೆಯ ಮಾಡಿ
ಕಾಡುಮೃಗಗಳಿಗೆ ಅಂಜಿದಡೆಂತಯ್ಯ' ಎಂದು ಹೇಳಿ
ಪಡಬಾರದ ಕಷ್ಟವನು ಪಟ್ಟು
ಕದಳಿ ಬನವ ಹೊಕ್ಕು, ಸುತ್ತಿ ಸುಳಿದ
ಮಹಾ ಸಾತ್ವಿಕಳು ನೀನಕ್ಕ
ಅನುಭವ ಮಂಟಪದಲ್ಲಿ ಮಿನುಗಿ; ಯಶಗಳಿಸಿ
ಪುರುಷ ಸಮಾನವಾದ ಹಕ್ಕನ್ನು ಪಡೆದು
ಪ್ರಭುದೇವರ ಪ್ರಶಂಸೆಗೇ ಪಾತ್ರಳಾದ ನೀನು
ಸಾಮಾನ್ಯಳೇನಕ್ಕ? ನೀನು ಹೊರಟು
ಹೋದಂದಿನಿಂದ
ಮನು ಕುಲಕೋಟಿ ತನ್ನ ಸ್ಮೃತಿ ಕಳೆದುಕೊಂಡು
ಕಂಗಾಲಾಗಿ ನಿನ್ನ ದಾರಿಯನು ಕಾಯುತಿಹುದು
ನೀನು ನಿನ್ನ ಪತಿಯೊಡನೆ
ಹರಕೆ ಕೊಡಲು ಬರುವೆ ಎಂದು ಕಾದು
ಕುಳಿತಿಹರು ತಾಯೇ; ಮಹಾಮಾಯೆ
ಮಲ್ಲಿಕಾರ್ಜುನನ ಕರೆದುಕೊಂಡು ಧರೆಗಿಳಿದು
ಬಾ ಅಕ್ಕ; ಈಗ ಬಿಟ್ಟಿಹರು ಮನುಜರು
ತಮ್ಮ ಸೊಕ್ಕ

—ಕೆ. ಎಸ್. ರಾಜ
ಸಿದ್ಧಗಂಗಾ

# ಸ್ತ್ರೀ–ಸರ್ವಜ್ಞನ ದೃಷ್ಟಿಯಲ್ಲಿ

—ಸಿ. ದಾಕ್ಷಾಯಣಿ

"ಕಲ್ಲೆದೆಯನ್ನು ಮೆಲ್ಲೆದೆ ಮಾಡುವುದೇ ಸಾಹಿತ್ಯ. ನೋವಿನ ಎದೆಗೆ ನಲಿವನ್ನು ನೀಡಬಲ್ಲುದೇ ಸಾಹಿತ್ಯ." ಈ ಸಮಸ್ತ ಸಾರವು ಕನ್ನಡ ಸಾಹಿತ್ಯದಲ್ಲಿ ಸಂಗವಿುಸಿಕೊಂಡಿದೆ. "ನಂಜಿನ ನಾಲಿಗೆಯ ಬಿರುನುಡಿಯಾಗಿರದೆ, ಒಳ ಎದೆಯ ಮೆಲುನುಡಿಯಾಗಿ, ಸರಳ, ಸುಸುಮ ಕೋಮಲವಾಗಿ ಮೂಡಿಬಂದ ಬಸವಣ್ಣನವರ ವಚನಗಳು, ದಾಸರ ಕೀರ್ತನೆಗಳು ಜನರ ಎದೆಯಲ್ಲಿ ವರುಷವೆನಿತಾದರೂ ಹೊಸದರಂತೆ, ಸದಾ ಹಸಿರಾಗಿ ನಿಂತಿವೆ. ಸಮಾಜಕ್ಕೆ ಇಂತಹ ಉತ್ತಮ ಸೇವೆಯನ್ನು ಸಲ್ಲಿಸಿದವರಲ್ಲಿ ಸರ್ವಜ್ಞನೂ ಒಬ್ಬ.

ಸರ್ವಜ್ಞನ ಕಾಲ, ದೇಶ, ತಂದೆ, ತಾಯಿಗಳ ಬಗ್ಗೆ ಖಚಿತ ವಿಚಾರ ತಿಳಿದು ಬಂದಿಲ್ಲ. ಆದರೆ ಆತನು ಬರೆದನೆಂದು ಹೇಳಲಾದ ಸಹಸ್ರಾರು ವಚನಗಳು ನಾಡಿನ ಜನರ ಮನದಲ್ಲಿ ಚಿತ್ರದಂತೆ ಕೊರೆಯಲ್ಪಟ್ಟು ನಿಂತಿವೆ. ಒಟ್ಟನಲ್ಲಿ "ಆಡು ಮುಟ್ಟದ ಸೊಪ್ಪಿಲ್ಲ; ಸರ್ವಜ್ಞ ಬರೆಯದ ವಿಚಾರವಿಲ್ಲ" ಈ ಕವಿಯು ಸಮಸ್ತ ವಿಚಾರಗಳಲ್ಲಿ ಪ್ರೌಢಲೇಖನಿಯ ವ್ಯವಸಾಯವೆಸಗಿದ್ದಾನೆ.

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ:" ತತ್ಕಾರಣ ಜಗತ್ತಿನಲ್ಲಿ ಸ್ತ್ರೀಯರ ಬಗ್ಗೆ ಮಹಾಪುರುಷರು ವಿವಿಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ 'ಮಾತೃ ದೇವೋ ಭವ' ಎಂದು ಪೂಜಿಸಿದ್ದಾರೆ. "ಹೆಣ್ಣಲ್ಲವೆ ನಮ್ಮನ್ನೆಲ್ಲ ಹಡೆದ ತಾಯಿ" ಎಂದು ಸತ್ಯದ ಅರಿವು ಮೂಡಿಸಿದ್ದಾರೆ. ಪೆಣ್ಣನ್ನು ಅಲ್ಲಗಳೆದಿಲ್ಲವೆಂದೇನಿಲ್ಲ "ಹೆಂಡತಿ ಪ್ರಾಣ ಹಿಂಡುತಿ" ಎಂದಿದ್ದಾರೆ; 'ನಂಬಬೇಡಿ ನಾರಿಯರನು ಹಂಬಲ ಹಾರೈಸಬೇಡಿ' ಎಂದು ಕಾಮಿನಿಯರ ಬಗ್ಗೆ ಎಚ್ಚರವಿತ್ತಿದ್ದಾರೆ. ಇವು ಜೀವನದ ಪರಿಸ್ಥಿತಿ, ವ್ಯಕ್ತಿಯ ಮನೋಭಾವ, ಘಟನೆಗಳಿಗನುಸಾರವಾಗಿ ಮೂಡಿದ ಅಭಿಪ್ರಾಯಗಳು

ಜೀವನದ ಬಹು ವಿಷಯಗಳ ಮೇಲೆ ನಿರ್ಭೀತಿಯಿಂದ ತನ್ನ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ ಸರ್ವಜ್ಞ, ಹೆಣ್ಣು ಮಕ್ಕಳ ಮೇಲೂ ತನ್ನ ನಿಲುವನ್ನು ವ್ಯಕ್ತಪಡಿಸಿದ್ದಾನೆ. ಸರ್ವಸಂಗ ಪರಿತ್ಯಾಗಿಯಾದ ಸರ್ವಜ್ಞ ಹೆಣ್ಣನ್ನು ಹಳಿಯದೆ, ಅಲ್ಲಗಳೆಯದೆ ಆಕೆಗೆ ಉತ್ತಮ ಸ್ಥಾನವನ್ನು ಕೊಟ್ಟಿದ್ದಾನೆ. ಆ ವಿಚಾರವನ್ನು ಅವನ ನುಡಿಗಳಿಂದಲೇ ಅರಿಯಲೆಳಸೋಣ.

ಹೆಣ್ಣಿನಿಂದಲೆ ಇಹವು। ಹೆಣ್ಣಿನಿಂದಲೆ ಪರವು
ಹೆಣ್ಣಿನಿಂದಲೆ ಸಕಲ ಸಂಪದವು। ಹೆಣ್ಣೊಲ್ಲ
ದಣ್ಣಗಳು ಯಾರು ? ಸರ್ವಜ್ಞ ॥

ರಾಮಕೃಷ್ಣ ಪರಮಹಂಸರ ಆಧ್ಯಾತ್ಮಿಕ ಜೀವನಕ್ಕೆ ಪುರಕವಾಗಿದ್ದ ಶಾರದಾ ದೇವಿ, ಜಿಪುಣನಾಗಿ ಬಾಳುತ್ತಿದ್ದ ಪುರಂದರದಾಸನಿಗೆ ಜಗತ್ತನ್ನು ಬೆಳಗುವ ಜ್ಯೋತಿಯಾಗಲು ಸಾಧಕಳಾದ ಆತನ ಪತ್ನಿ ಸರಸ್ವತಿ, ಪತಿಗೆ ಸರ್ವ ವಿಧದಲ್ಲೂ ಪ್ರಚೋದಕಳಾದ ಗಾಂಧೀಜಿಯವರ ಸಹಧರ್ಮಿಣಿ ಕಸ್ತೂರಿ ಬಾ ಮುಂತಾದ ಮಹಿಳಾ ಮಣಿಗಳು ನೆನೆಪಿಗೆ ಬರುತ್ತಾರೆ. ಪುರಾಣ ವಿಖ್ಯಾತರಾದ ಮೃತ್ಯುಂಜಯೆ ಸಾವಿತ್ರಿ, ಪತಿಗೆ ಜ್ಞಾನ ಸ್ವರೂಪ ಮಾಡಿಸಿದ ಚೂಡಾಲ, ಅಷ್ಟೈಶ್ವರ್ಯ ಪರಿತ್ಯಾಗಿನಿಯಾದ ಮೈತ್ರೇಯಿ, ಇವರು

ಗಳ ಚರಿತ್ರೆಯನ್ನು ಸ್ಮರಿಸಿದಾಗ ಸರ್ವಜ್ಞನ ಮಾತು ಪುಷ್ಟಿಗೊಳ್ಳುತ್ತದೆ.

ಪಲ್ಲಕ್ಕಿ ಏರಿದವರೆಲ್ಲಿಂದ ಬಂದಿಹರು
ನೆಲ್ಲಕ್ಕಿಯಂತ ಸುಲಿನಲ್ಲ ಹಿರಿಯರು
ನಲ್ಲಳಿಂದಲ್ಲೆ ? ಸರ್ವಜ್ಞ ||

ಹೆಣ್ಣಿನಿಂದಲೇ ಜನ್ಮತಾಳಿ, ಹೆಣ್ಣಿನ ವಾತ್ಸಲ್ಯ ಪ್ರೇಮದಿಂದ ಬೆಳೆದು, ಕೊನೆಗೆ ಹೆಣ್ಣನ್ನು ಜರಿಯುವವರಿಗೆ ಈ ಪದ್ಯವೊಂದು ಸವಾಲಾಗಿದೆ. ಇದು ಸರ್ವಜ್ಞನ ಹಿರಿಮೆಯ ಪ್ರತೀಕವಾಗಿದೆ.

ಹೆಣ್ಣನ್ನು ಹೊಗಳಿದ ಸರ್ವಜ್ಞ, ಹೆಣ್ಣಿನ ಮೋಹಕ್ಕೆ ಎಲ್ಲರೂ ಹೇಗೆ ಬಲಿ ಬೀಳುವರೆಂಬುದನ್ನೂ ಚಿತ್ರಿಸಿದ್ದಾನೆ.

ಪರ ತಪಸಿ ಸನ್ಯಾಸಿ । ಪರಮಯೋಗಿಯು
ಮುನಿಯು
ಶಿರಸಿಕ್ಕು ಮಾಯೆಗೊಳಗಾಗಿ ಇರುತಿರಲು
ಪರರ ಪಾಡೇನು ಸರ್ವಜ್ಞ ||

ಹೆಣ್ಣಿಗಾಗಿ ಮೋಹಿತನಾಗಿ ಮಣ್ಣು ಮುಕ್ಕಿದ ರಾವಣ, ಉಗ್ರತಪಸ್ವಿ ವಿಶ್ವಾಮಿತ್ರ ಇವರೆನ್ನೆಲ್ಲ ಮಾಯೆಯ ರೂಪದಲ್ಲಿ ಹೆಣ್ಣು ಬಂಧಿಸಿದಳು. 'ಹೆಣ್ಣು ಶಿವನನುಂಗಣ್ಣು.' ಸ್ತ್ರೀವ್ಯಾಮೋಹದಿಂದ ಗೆದ್ದವರೇ ಧನ್ಯರು

ಗುಣಗಣಿಯಾದ ಸತಿ ದೊರೆಯಲು ಪತಿ ಪುಣ್ಯಮಾಡಿರಬೇಕು. ಅದಕ್ಕಾಗಿ ಸರ್ವಜ್ಞ.

ಅಂಗನೆಯು ಒಲಿಯುವುದು, ಬಂಗಾರ
ದೊರೆಯುವುದು
ಸಂಗ್ರಾಮದೊಳಗೆ ಗೆಲುವುದು।ಇವು ಮೂರು
ಸಂಗಯ್ಯನೊಲುಮೆ ಸರ್ವಜ್ಞ ||

ಎಂದಿದ್ದಾನೆ

ಸನ್ಯಾಸಿಯಾದ ಸರ್ವಜ್ಞ ಸಂಸಾರದ ಹಿರಿಮೆಯನ್ನು ಅರಿತಿದ್ದ. ಸಂಸಾರವು ಜೀವನದಲ್ಲಿ ತೃಪ್ತಿ ನೆಮ್ಮದಿಗಳನ್ನುಂಟುಮಾಡುವ ಸಾಧನವೆಂದು ಅರಿತಿದ್ದ ಅದಕ್ಕಾಗಿ ಅನ್ನುತ್ತಾನೆ

ಸುಣ್ಣವಿಲ್ಲದ ವೀಳೆ, ಬಣ್ಣವಿಲ್ಲದ ಮದುವೆ
ಹೆಣ್ಣಿಲ್ಲದವನ ಸಂಸಾರ, ಮಳಲೊಳಗೆ
ಎಣ್ಣೆ ಹೊಯ್ದಂತೆ ಸರ್ವಜ್ಞ ||

'ಮಕ್ಕಳಿಲ್ಲದ ಬಾಳು ಚೊಕ್ಕವಿಲ್ಲ.' ತತ್ಕಾರಣ

ಮಕ್ಕಳಿಲ್ಲದ ಮನೆಯು । ಪಕ್ಕಿಯಿಲ್ಲದ ವನವು
ದಿಕ್ಕಿಲ್ಲದವನ ಸಂಸಾರ । ಕಳ್ಳನು ಮನೆ—
ಹೊಕ್ಕು ಹೋದಂತೆ ಸರ್ವಜ್ಞ || ಎನ್ನುತ್ತಾನೆ

ಸಂಶಯ ಪಡುವ ಪತಿಗಳನ್ನು ಈತ ಖಂಡಿಸಿದ್ದಾನೆ

ಒಪ್ಪುಳ್ಳ ಹೆಣ್ಣಿನಲಿ । ತಪ್ಪು ಸಾಧಿಪನೆಗ್ಗ
ಕಪ್ಪುರದ ಮೇಲೆ ಕಸವಿರಲು, ಅದನೊ
ಪ್ಪದವರುಂಟೆ ಸರ್ವಜ್ಞ ||

'ಚಿತ್ತದಲಿ ಚೆಲುವೆಯಾದರೆ' ಆಕೆಗೆ 'ಮುಸುಕು' ಅನವಶ್ಯಕ ಎಂದಿದ್ದಾನೆ. ಚಿತ್ತಸ್ಥೈರ್ಯ ಪತಿವ್ರತೆಯ ಲಕ್ಷಣ. ಆಕೆಗೆ ಯಾವ ಬಾಹ್ಯ ಪಹರೆಯೂ ಬೇಡ. ಇಂತಹವಳೊಡನೆ ಬಾಳಿದರೆ ಅದಕ್ಕೆ ಸಮನಿಲ್ಲ.

ಮನಬಂದ ಹೆಣ್ಣನ್ನು ।ವಿನಯದಲಿ ಕರೆ ತಂದು
ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ
ಕೆನೆಯ ಸವಿದಂತೆ ಸರ್ವಜ್ಞ ||

ಆದರೆ ಪ್ರೀತಿಯಿಲ್ಲದವಳೊಡನೆ ಸಂಸಾರ ಮಾಡುವುದು :—

ಕಲ್ಲು ಪುತ್ಥಳಿಯ ಅಪ್ಪಿ ಹಲ್ಲು ಹೋದಂತೆ
'ಚಿತ್ತವಿಲ್ಲದವಳೊಡನಾಟ ಕತ್ತೆಯ
ಮುಂದತ್ತು ಕರೆದಂತೆ"
'ಬತ್ತಿದ ಕೆರೆಗೆ ಬಾಯಾರಿ ಗಿಣಿ ಸತ್ತು

ಹೋದಂತೆ' ವ್ಯರ್ಥ ಎಂದು ಸ್ಪಷ್ಟವಾಗಿ ಚಿತ್ರಿಸಿದ್ದಾನೆ.

ಸಂತೋಷದಿಂದ ಸಂಸಾರ ಮಾಡದವಳ ಒಡನಾಟ 'ಮಾವರಸಿ ಬೇವು ತಿಂದಂತೆ"

'ಇಟ್ಟಿಯಲಿ ಇಂದು ಕೊಂಡಂತೆ" 'ಸಮರ
ದಲಿ ಬಿಲ್ಲು ಮುರಿದಂತೆ "
"ಮಳಲೊಳಗೆ ಬಿರೆದ ಕೊಳಂತೆ "
ನಿರರ್ಥಕವೆಂದಿದ್ದಾನೆ.

ಬೆಂಕಿಯಿಂದ ಉಪಯೋಗವನ್ನೂ ಪಡೆಯ ಬಹುದು; ಕೈಯನ್ನೂ ಸುಟ್ಟು ಕೊಳ್ಳಬಹುದು ಅದ ರಂತೆ ಒಳಿತೂ ಉಂಟು. ಆಕೆ ಒಲಿದು ನಾರಿಯಾದಂತೆ, ಮುನಿದು ಮಾರಿಯೂ ಆಗಬಲ್ಲಳು; ಎನ್ನುತ್ತಾನೆ ಸರ್ವಜ್ಞ.

**ನಾರಿ ಪರರುಪಕಾರಿ । ನಾರಿ ಸ್ವರ್ಗಕ್ಕೆ ದಾರಿ**
**ನಾರಿ ಸಕಲರಿಗುಪಕಾರಿ । ಮುನಿದರೆ**
**ನಾರಿಯೇ ಮಾರಿ ಸರ್ವಜ್ಞ ॥**

ಹೀಗೆ ' ಹೆಣ್ಣನ್ನು ನಂಬಬೇಕು, ನಂಬದಂತಿರಬೇಕು" ಎಂದು ಆಕೆಯ ಗುಣ – ಅವಗುಣಗಳನ್ನು ಚಿತ್ರಿಸಿ ಸರ್ವಾಂಗಪೂರಿತ ಸಂಸಾರದ ಚಿತ್ರವನ್ನು ನಮ್ಮ ಮುಂದಿಟ್ಟಿದ್ದಾನೆ ಆ ಮಹಾದಾರ್ಶನಿಕ ಸರ್ವಜ್ಞ-ಮೂರ್ತಿ

—

[ ಲೇಖನದಲ್ಲಿ ಬಳಸಿರುವ ಸರ್ವಜ್ಞನ ವಚನಗಳನ್ನು ರೆ. ಚನ್ನಪ್ಪ ಉತ್ತಂಗಿ ಅವರ ಸಂಗ್ರಹದಿಂದ ಆರಿಸಿದೆ, ಸುವರ್ಣ ಸಂಪುಟದ ಗ್ರಂಥಋಣ.]

## ಕನ್ನಡ ಸೂಕ್ತಿ ಸಂಹಿತೆ

### ನಾರಿಯರಿಗೆ ಪೂಜ್ಯತೆ

ಎಲ್ಲಿ ನಾರಿಯರೊಲುಮೆ ಪಡೆವರೊ
ಅಲ್ಲಿಯೊಲಿವರು ದೇವರು

### ಪುಸ್ತಕ- ಹೆಂಗಸು- ಹಣ

ಪುಸ್ತಕ ಹೆಂಗಸು ಹಣವಿವುಗಳನು
ಅನ್ಯರಿಗಿತ್ತರೆ ಕಳೆದಂತೆ

### ಜನನಿ - ಜನ್ಮಭೂಮಿ

ಸಗ್ಗಕ್ಕಿಂತಲು ಮೇಲೆನಿಸಿಹರು
ಜನನಿಯು ಹುಟ್ಟಿದ ನೆಲ ಕೂಡ

### ವಿವಾಹ – ವಿವಾದ

ವಾಹವೂ ವಿವಾವಿಪವೂ
ಸಮಾನರಲ್ಲಿ ಶೋಭೆಯು

— ಅ ಶಂ. ನಾವಡ

# ಮಾರೀಚ— { ಸದ್ಗುಣಗಳ ಸಮುದ್ರ / ರಾಮಾಯಣದ ಜೀವನಾಡಿ

—ಜಿ. ಗೋವಿಂದರಾಜು.

ವಾಲ್ಮೀಕಿಯಿಂದ ಹಿಡಿದು ಕುವೆಂಪು ರವರೆಗೂ ಅನೇಕ ಕವಿಗಳು ರಾಮಾಯಣವನ್ನು ತಮ್ಮದೇ ಆದ ವೈಶಿಷ್ಟ್ಯ ಪೂರ್ಣ ಶೈಲಿಯಿಂದ ರಚಿಸಿದ್ದಾರೆ. ಎಲ್ಲ ರಾಮಾಯಣಗಳ ಸೂಕ್ಷ್ಮ ಸಮೀಕ್ಷೆ ನಡೆಸಿದಾಗ ದುಷ್ಟ ಶಿಕ್ಷಕನೂ, ಶಿಷ್ಟ ರಕ್ಷಕನೂ ಆದ ಪರಮಾತ್ಮನು ದೇವತೆಗಳ ಪೀಡಕನೂ, ದಾನವೇಂದ್ರನೂ ಆದ ರಾವಣನ ದಾನವತ್ವವನ್ನು ತೊಡೆದು ಮುಕ್ತಿ ಮಾರ್ಗವನ್ನು ಕಟ್ಟಿಸುವುದು ಮತ್ತು ಅವನ ಅನುಯಾಯಿಗಳೂ, ಮುನಿ ಪೀಡಕರೂ ಆದ ರಾಕ್ಷಸರನ್ನು ಸಂಹರಿಸುವುದೇ ಆಗಿದೆ. ದೇವ ದೇವನು ಮಾನವ ರೂಪವನ್ನು ತಾಳಿದಾಗ ಮಾನವರಿಗೆ ಸಹಜವಾದ ರೀತಿಯಲ್ಲಿಯೇ ವಿದ್ಯೆ, ವಿವಾಹ ಮುಂತಾದ ಹೆಜ್ಜೆಗಳನ್ನು ದಾಟಿಯೇ ಕರ್ತವ್ಯದತ್ತ ಹೋಗಬೇಕಾಗುತ್ತದೆ. ಈ ಜೀವನದ ಹೆಜ್ಜೆಗಳಿಗೆ ಪೋಷಕವಾಗಿ ಸರಪಳಿಗಳಂತೆ ಹೆಣೆದುಕೊಂಡು ಹೋಗುವ ಪಾತ್ರಗಳೇ ಗೌಣ ಪಾತ್ರಗಳು. ಈ ಗೌಣ ಪಾತ್ರಗಳನ್ನು ಅಂತ ದೃಷ್ಟಿಯಿಂದ ನೋಡಿದರೆ ಅವುಗಳು ಪ್ರಮುಖ ಪಾತ್ರಗಳಿಗಿಂತ ಹಿರಿದಾಗಿ ಕಾಣುತ್ತವೆ. ಇಂತಹ ಗೌಣ ಪಾತ್ರಗಳಲ್ಲಿ ಮಾರೀಚನೂ ಒಬ್ಬ.

ಪೂರ್ವಾರ್ಧದಲ್ಲಿ ಈ ಪಾತ್ರ ತನ್ನ ದುಷ್ಕೃತ್ಯವನ್ನು ಎಸಗಿದರೂ, ತಂದೆ ತಾಯಿಯರ ಮಮತೆಯ ಸುಳಿಯಲ್ಲಿ ಬಂಧಿತರಾಗಿ ಇನ್ನೂ ಬಾಲ್ಯಾವಸ್ಥೆಯನ್ನು ಬಿಡದೆ ಕುಳಿತಿದ್ದ ಶ್ರೀರಾಮ-ಲಕ್ಷ್ಮಣರನ್ನು ಕರ್ತವ್ಯದ ಕಡೆ ಸೆಳೆದೊಯ್ದು ಸದ್ಗುರುವನ್ನು ಅವರಿಗೆ ದೊರಕಿಸಲೂ, ಮಹದ್ವಿದ್ಯೆಗಳನ್ನು ಅವರಿಗೆ ಕೈಗೂಡಿಸಲು, ಮಹಿಮೆಯನ್ನು ತೋರಲೂ, ಅವರು ಸಂಸಾರಿಗಳಾಗಲೂ, ಇನ್ನೂ ಹಲವಾರು ಪವಾಡಗಳಿಗೆ ಕಾರಣವಾಗುತ್ತದೆ ಶ್ರೀ ರಾಮನ ಬಾಣದ ಸೋಂಕಿನಿಂದ ಸುಜ್ಞಾನವನ್ನು ಪಡೆದ ಈ ಪಾತ್ರ ಮಧ್ಯದಲ್ಲಿ ತಾಪಸ ವೃತ್ತಿಯಿಂದ ಪರಿಶುದ್ಧವಾಗಿ ಪುಟವಿಟ್ಟ ಚಿನ್ನದಂತಾಗಿ ಸದ್ಗುಣಗಳ ಸಮುದ್ರವಾಗುತ್ತದೆ.

ಉತ್ತರಾರ್ಧದಲ್ಲಿ ಬಲವಂತದ ಪ್ರಚೋದನೆಗೊಳಗಾಗಿ ಮಾಡಬಾರದ ಕೆಲಸ ಮಾಡಬೇಕಾಗಿ ಬಂದಾಗ ದುಷ್ಟನ ಕೈಯಲ್ಲಿ ಹತವಾಗಿ ನರಕವನ್ನು ಹೊಂದುವುದಕ್ಕಿಂತ ಪರಮಾತ್ಮನ ಕೈಯಲ್ಲಿ ಹತವಾಗಿ ಸಗ್ಗವನ್ನು ಕಾಣುವುದೇ ಶ್ರೇಷ್ಠವೆಂದು ಬಗೆದು, ಆ ಹೇಯ ಕಾರ್ಯವನ್ನು ಮಾಡಹೊರಟರೂ ಶ್ರೀ ರಾಮನ ಬಹುಮುಖ್ಯ-ಉದ್ದೇಶವಾದ ದಾನವೇಂದ್ರನ ಸಂಹಾರ ಕ್ರಿಯೆಗೆ ನಾಂದಿ ಹಾಡಿ ಮುಕ್ತಿ ಪಡೆಯುತ್ತದೆ. ಹೀಗೆ ರಾಮಾಯಣದುದ್ದಕ್ಕೂ ತನ್ನ ಬಹುಮುಖ ಪ್ರತಿಭೆಯನ್ನು ಪ್ರದರ್ಶಿಸುತ್ತ ಸಾಗಿ ಕೊನೆಗೆ ಮಾಯವಾಗುತ್ತದೆ ಈ ಪಾತ್ರ.

ಮಾರೀಚನು "ಋಷಿಯ ಶಾಪದಿಂ ಸುಂದರಿ ಜಕ್ಕಿಣಿಯಾಗಿ ಪುಟ್ಟ ತಾಟಕೆಯೆಂಬ ಘೋರ ರಾಕ್ಷಸ ರೂಪ" ವನ್ನು ತಾಳಿ ಅಲೆಯುತ್ತಿರುವವಳ

ಮಗ; ದಶಕಂಠನ ಸೋದರ ಮಾವ. ಹುಟ್ಟಿನಿಂದಲೇ 'ವಿಪುಳ ಮಾಯಾಕುಶಲ ವಿದ್ಯಾ ಚಪಳ' ಮಾರೀಚ ಕಾಮರೂಪಿ, ತನ್ನ ಪ್ರತಿಭೆಯ ದುರುಪಯೋಗ ಮಾಡಿಕೊಂಡು ಋಷ್ಯಾಶ್ರಮಗಳಿಗೆ ಬೆಂಕಿಯಿಡುವುದೂ, ಯಜ್ಞಕುಂಡಗಳಲ್ಲಿ ಮಧ್ಯಮಾಂಸಗಳನ್ನು ಸುರಿಯುವುದೂ, ಕಾಲಮೇಘಗಳನ್ನು ಪೂಜಿಸಿ ಬಿರುಗಾಳಿಯನ್ನೆಬ್ಬಿಸಿ ಅಲ್ಲೋಲಕಲ್ಲೋಲ ಮಾಡುವುದೂ ಮತ್ತು ಮುನಿಗಳ ರಕ್ತ ಮಾಂಸಗಳನ್ನು ಮೆಲ್ಲುವುದೂ ಇವನ ನಿತ್ಯದ ಕೆಲಸ. ಸಮಯಾಸಮಯಗಳನ್ನು ನೋಡಿಕೊಂಡು ಅದಕ್ಕೆ ತಕ್ಕಂತೆ ವೇಷಗಳನ್ನು ಹಾಕುವುದರಲ್ಲಿ ಮಾರೀಚ 'ಮಹಾಮತಿ' ಇವನ ಈ ದುಷ್ಕೃತ್ಯಗಳೇ ರಾಮಲಕ್ಷ್ಮಣರ ಪಾತ್ರಕ್ಕೆ ನೀರು, ಗೊಬ್ಬರದಂತೆ ಪೋಷಕಗಳು. ರಾಮ-ಲಕ್ಷ್ಮಣರು ಬಾಲ್ಯಾವಸ್ಥೆಯ ಮುಕ್ತಾಯ ಘಟ್ಟದಲ್ಲಿದ್ದರೂ ತಮ್ಮವರ ಮಮತೆಯ ಬಂಧನದಿಂದ ಹೊರಬರುವಲ್ಲಿ ಮಹಾಕಾರಣವೊಂದು ಬೇಕಿತ್ತು. ಅರಮನೆಯಲ್ಲಿ ವಿದ್ಯೆ ಕಲಿಸುವ ಗುರುವಿಗೇನೂ ಕೊರತೆ ಯಿಲ್ಲದಿದ್ದರೂ ಲೋಕಕಂಟಕರಾದ ರಾಕ್ಷಸರ ಸಂಹಾರ ಕ್ರಿಯೆಗೆ ತಕ್ಕ ಘನ ವಿದ್ಯೆಯನ್ನು ಹೇಳಿಕೊಡುವಂತಹ ಸದ್ಗುರು ಅವರಿಗೆ ಬೇಕಿತ್ತು. ಅವರ ಪರಾಕ್ರಮ ಪ್ರದರ್ಶನವಾಗಿ ತೋಳ್ಬಲವಲ್ಲಿ ಜನತೆಗೆ ನಂಬಿಕೆ ಹುಟ್ಟಬೇಕಿತ್ತು. ಅವರು ಮಹಿಮಾಪುರುಷರು ಎಂದು ಜನತೆ ಅರಿಯಲು ಅವರಿಂದ ಪವಾಡಗಳು ನಡೆಯಬೇಕಿತ್ತು. ಮತ್ತು ದಶಕಂಠನಂತಹ ದಾನವನು ನಾಶವಾಗಬೇಕಾದರೆ ಶಕ್ತಿ ಸ್ವರೂಪಿಣಿ ಸೀತೆ ಅವರಿಗೆ ಬೆಂಬಲವಾಗಿ ಜೊತೆಗೂಡಬೇಕಿತ್ತು. ಈ ಎಲ್ಲ ಕಾರ್ಯಗಳು ರಾಮಾಯಣದ ಪೂರ್ವಾರ್ಧದಲ್ಲಿ ಮಾರೀಚನ ಕಾರಣದಿಂದಲೇ ಆರಂಭವಾಗುತ್ತವೆ

ಮಹಾಕ್ಷತ್ರಿಯ ಪಟ್ಟದಿಂದ ಮಹಾಬ್ರಾಹ್ಮಣ ಪಟ್ಟಕ್ಕೇರಿದ್ದ ವಿಶ್ವಾಮಿತ್ರ ಮುನಿಗಳು ಯಾಗದಲ್ಲಿ ನಿರತರಾಗಿದ್ದಾಗ ಮಾರೀಚನು ಸುಬಾಹುವಿನೊಂದಿಗೆ ಸೇರಿಕೊಂಡು ಮಾಡಿದ ಕೃತ್ಯಗಳು ಅತಿ ಭಯಂಕರ, ಯಾಗ ರಕ್ಷಣೆಗಾಗಿ ವಿಶ್ವಾಮಿತ್ರರು ಅರಸಿ ಬಂದದ್ದು ರಾಮ-ಲಕ್ಷ್ಮಣರ ಬಳಿಗೆ ಪರಮಗುರುವಾದ ಅವರು ತಾವಾಗಿಯೇ ಅರಸಿದರೂ ದೊರಕುವವರಲ್ಲ. ಹೀಗಿರುವಾಗ ಆ ಗುರು ಅವರಾಗಿಯೇ ರಾಮ-ಲಕ್ಷ್ಮಣರಿಗೆ ಗುರುವಾಗುವುದಾಗಿ ಹೇಳಿದ್ದು ಮಾರೀಚನಿಂದಲೇ ಎಂಬುದರಲ್ಲಿ ಸಂಶಯವಿಲ್ಲ. ಭವ ಬಂಧಿತರಾಗಿ ಉಳಿದಿದ್ದ ಅಣ್ಣ-ತಮ್ಮಂದಿರು ಹೊಸಿಲು ದಾಟಿ ಹೊರಬಂದಾಗ ಅವರಿಗೆ ದೊರಕಿದ ಅಪೂರ್ವ ವಿದ್ಯೆಗಳು 'ಬಲಾ' ಮತ್ತು 'ಅತಿಬಲಾ' ಅನಂತರ ತಾಟಕಿಯ ಸಂಹಾರದ ಪರಾಕ್ರಮ ಪ್ರದರ್ಶನ. ಯಜ್ಞರಕ್ಷಣೆಯ ಹೊಣೆ, ಅಲ್ಲಿ ಪ್ರದರ್ಶನವಾಗುತ್ತದೆ. ಮಾರೀಚನ "ವಿಪುಳ ಮಾಯಾವಿದ್ಯೆ" ಮತ್ತು "ಮಹಾಮತಿಯ ಸೂಕ್ಷ್ಮತೆ" ರಾಮ-ಲಕ್ಷ್ಮಣರ ಬಾಣಕ್ಕೆ ಸುಬಾಹು ಬಲಿಯಾದಾಗ ಮಾರೀಚನ ಬುದ್ಧಿ ಸೂಕ್ಷ್ಮವಾಗುತ್ತದೆ. ರಾಮಲಕ್ಷ್ಮಣರಿಗೆ ದ್ವಿಜರನ್ನು ಕಂಡರೆ ಅತೀವ ಭಕ್ತಿ ಎಂಬುದನ್ನು ತಿಳಿದಿದ್ದ ಮಾರೀಚ ತಾಪಸವೇಷವನ್ನು ಕೈಗೊಂಡು "ಕೊಲೆ ಗಂಘವಿಸಿ" ಬರುತ್ತಾನೆ. ಅವನ ವಿಚಾರ-ಮತಿ ಎಷ್ಟು ಚುರುಕಾಗಿತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ. ಅವನ ದುಷ್ಪ್ರವೃತ್ತಿಯ ಅಂತ್ಯಕಾಲ ಮತ್ತು ಜ್ಞಾನೋದಯದ ಪವಿತ್ರ ಮುಹೂರ್ತವಿದು. ಆದ್ದರಿಂದಲೇ ತಾಳುವುದಕ್ಕೆ ಅನೇಕ ರೂಪಗಳಿದ್ದೂ ತಾಪಸ ರೂಪವೇ ಅವನ ಆಯ್ಕೆ. ಅಂತೆಯೇ ಶ್ರೀರಾಮನು ಬ್ರಾಹ್ಮಣ ರೂಪದಲ್ಲಿದ್ದ ಮಾರೀಚನನ್ನು 'ಹೋದ ಮೈಯಲ್ಲೇ ಹೋಗಲೆನುತ' ಬಾಣದಿಂದ ಮೃದುವಾಗಿ ಹೊಡೆಯಲು 'ಏರ್ವಡೆದು ದೇಹ ಮುದುಳತ ಪ್ರಾಣ ನೋಡುವೋಲ್ ಕೆಟ್ಟೋಡಿ' ಒಂದಲ್ಲ ಎರಡಲ್ಲ 'ನೂರು ಯೋಜನದಳವಿಯಲಿ ಮಿಗೆ ಹಾರಿ' ನಡುಗಡಲಲ್ಲಿ ಬಳುತ್ತಾನೆ. ಮೊದಲಾಗಿ 'ವಸುಮತಿಯ ಬಲು ಭಾರವನು ಭಂಜಿಸೆ ಭಂಜಿಸೆ ಭುಜಂಗಶಯನ ರಘುಪತಿ ವೆಸರಲುದಿಸಿದನು' ಎಂಬ ಮತಿ ಅವನಿಗೆ ಗೋಚರಿಸಿತು. ಅಂದಿನಿಂದ ಮಾರೀಚನು ಜಪ, ಸಮಾಧಿ, ಧ್ಯಾನ, ಮೌನದ ತಪದಲ್ಲಿ ಮಗ್ನನಾದ ಶ್ರೀರಾಮ-ಲಕ್ಷ್ಮಣರು ಮುಂದಡಿಯಿಟ್ಟು ಬಹುಕಾಲ ಶಿಲೆಯಾಗಿ ಬಿದ್ದಿದ್ದ ಅಹಲ್ಯೆಯನ್ನುದ್ಧರಿಸು

ತ್ತಾರೆ. ಅಹಲ್ಯೆಯೂ ಮಾರೀಚನಿಗೇ ಕೃತಜ್ಞಳಾಗಿರಬೇಕಲ್ಲವೆ? ಅನಂತರ ಮಿಥಿಲಾಪಟ್ಟಣ ಪ್ರವೇಶ, ಶಿವಧನುಸ್ಸಿನ ಭಂಗ, ಪರಶುರಾಮನ ಗರ್ವಭಂಗ, ಸೀತಾ ಸ್ವಯಂವರ' ಅಯೋಧ್ಯಾ ಪ್ರಯಾಣ, ಮಾರೀಚನ ಪೂರ್ವಾರ್ಧ ಪಾತ್ರದ ಸಫಲತೆ ಇಲ್ಲಿಗೆ ಕೊನೆಗೊಳ್ಳುತ್ತದೆ.

ಗುಣ-ಶೀಲ ನಡತೆಗಳಲ್ಲಿ ಪೂರ್ವಾರ್ಧ ಮಾರೀಚನಿಗೂ ಉತ್ತರಾರ್ಧದ ಮಾರೀಚನಿಗೂ ಅರ್ಥಾತ್ ಸಂಬಂಧವಿಲ್ಲ. ಅಲ್ಲಿ ದೃಷ್ಕೃತ್ಯಗಳಆಗರವಾಗಿದ್ದರೆ, ಇಲ್ಲಿ ಸದ್ಗುಣಗಳ ಸಮುದ್ರ. ಅಲ್ಲಿ ವಿಷ ಪುಂಜತೆಯು. ರಕ್ಕಸ ವೇಷ, ಇಲ್ಲಿ ವಿರಕ್ತಿ ಸಹನೆಗಳ ತಾಪಸ ವೇಷ ಅಲ್ಲಿ ಕುಬುದ್ಧಿ ಕುಯುಕ್ತಿಗಳ ವಿವಿಧ ವೇಷಗವಾಂತು ಮುನಿ ಪೀಡಕನಾಗಿ ಪಾಪದ ಸಂಪದವನ್ನು ಸಂಪಾದಿಸುತ್ತಿದ್ದರೆ, ಇಲ್ಲಿ ಸುಬುದ್ಧಿ ಸುಯುಕ್ತಿಗಳಿಂದ ಸ್ವರ್ಣ ಜಿಂಕೆಯ ವೇಷವಾಂತು ರಾಮ ಬಾಣಕ್ಕೆ ಮೈಯೊಡ್ಡಿ ಮುಕ್ತಿ ಶ್ರೀಯ ಸಂಪಾದನೆ ಮಾಡುತ್ತಾನೆ.

ಉತ್ತರಾರ್ಧದ ಮಾರೀಚನಿಂದ ಆಗಿರುವ ಪ್ರಯೋಜನವೆಂದರೆ ಮಹತ್ತರವಾದುದ್ದು. ರಾಮಾಯಣ ಕಥೆಯ ಮುಖ್ಯ ಉದ್ದೇಶವಾದ ದಾನವೇಂದ್ರನ ಅಂತ್ಯಕ್ಕೆ ರಾಜಮಾರ್ಗವನ್ನು ಹಾಕಿಕೊಡುತ್ತಾನೆ ಮಾರೀಚ, ಇಲ್ಲಿ ಮಾರೀಚನಾಡುವ ಮಾತು ಮಾತಿನ ವೈಖರಿ ಮತ್ತು ಬೋಧನೆಯ ಕ್ರಮ ಇವುಗಳನ್ನು ನೋಡಿದರೆ ಅವನ ಶ್ರೇಷ್ಠ ವ್ಯಕ್ತಿತ್ವದ ಅರಿವಾಗುತ್ತದೆ. ದಾನವೇಂದ್ರನಾದ ರಾವಣನು ತನ್ನ ತಂಗಿಗಾದ ಅಪಮಾನ, ಖರದೂಷಣ-ವಿದೂಷಣರ ವಧೆ ಮತ್ತು ನೊಂದ ತಂಗಿಯ ದುರ್ಭೋಧನೆಗೆ ಒಳಗಾಗಿ ಸೀತಾಪಹರಣವನ್ನು ಬಯಸಿ, ತನ್ನ ಮಾವನಾದ ಮಾರೀಚನೇ ಅದು ಕೈಗೂಡುವಂತೆ ಮಾಡಲು ಸಮರ್ಥನು ಎಂದು ಆಲೋಚಿಸಿ ಮಾರೀಚನಲ್ಲಿಗೆ ಬರುತ್ತಾನೆ ದೈತ್ಯೇಂದ್ರನನ್ನು ಕಂಡಮಾರೀಚ ಸ್ವಾಗತವನ್ನು ಬಯಸಿ 'ರಕ್ಕಸವಳಿಗೆಪೆರ್ಮೆಯಾದ ನೀನು ಬಂದುದು ತಪಕೆ ತಾನಿಂದೇ ಸಿದ್ಧಿ ದೊರೆತ-ತ್ತೆ" ಎಂದು ಹೇಳಿ ರಾವಣನ ಬಗ್ಗೆ ತನಗಿದ್ದ ಸದ್ಭಾವನೆಯನು ತೋರ್ಪಡಿಸುತ್ತಾನೆ. ರಾವಣನಿಗೆ ಮಾರೀಚನನ್ನು ಕಂಡು ಅತ್ಯಾಶ್ಚರ್ಯವಾಗುತ್ತದೆ ಋಷಿ ಸಂಕಟಕೆ ಕಂಕಣಂ ಗಟ್ಟಿ ಪೂಣ್ದೆದಾರ್ಯ ಕಂಕಟನ ಸಂತ್ರಿಕ ಜಟಾಜಟಾವಲ್ಕಲದ ಮುನಿಯ ವೇಷಮಂ' ಕಂಡು ಕಿರುನಗೆ ನಕ್ಕು ತಾನು ಬಂದ ಕಾರ್ಯವನ್ನು ಒರೆಯುತ್ತಾನೆ. ಇಲ್ಲಿ ರಾವಣನಾಡುವ ಮಾತುಗಳಿಂದ ರಾವಣನ ಜೀವನದ ಹೆಜ್ಜೆ ಹೆಜ್ಜೆಯಲ್ಲೂ ಮಾರೀಚನು ರಾವಣನಿಗೆ ಆಸ್ಥಾನದಲ್ಲಿ ಮಂತ್ರಿಯಾಗಿ, ರಣದಲ್ಲಿ ಕಲಿಯಾಗಿ, ಕಷ್ಟಗಳಲ್ಲಿ ಭಾಗಿಯಾಗಿ, ಸುಖ ಸಂತೋಷಗಳಿಗೆ ಕಾರಣನಾಗಿ ಬಲಗೈಯಂತಿದ್ದುದನ್ನು ರಾವಣನು ಸ್ಮರಿಸುತ್ತಾನೆ. ಈಗ ತಾಪಸವೇಷ ಹಾಕಿಕೊಂಡು ವಿಧಿಯ ವಕ್ರದೃಷ್ಟಿಗೆ ಒಳಗಾದೆಯೆಂದು ಮರುಗುತ್ತಾನೆ. ತಾನು ಬಂದ ಕಾರ್ಯ ಕೈಗೂಡಲು ಅವನನ್ನು ಪ್ರಚೋದಿಸಬೇಕೆಂದು ಅವನ ತಾಯಿಯಾದ ತಾಟಕಿಯನ್ನು ಶ್ರೀ ರಾಮನು ಕೊಂದದ್ದನ್ನು ಮನಚುಚ್ಚುವಂತೆ ವಿವರಿಸುತ್ತಾನೆ. ಈಗ ವ್ಯಕ್ತವಾಗುತ್ತದೆ ಮಾರೀಚನ ಹೃದಯದಲ್ಲಿದ್ದ ತಾಯ ಮೇಲಿನ ಮಮತೆ ರಾಮನಿಂದ ಹತಳಾಗಿ ಭೂಮಿಗತಳಾಗಿ ದಹನ ಸಂಸ್ಕಾರವಿಲ್ಲದೆ ಕೊಳೆತು ನಾರುವ ತನ್ನ ತಾಯಿಯ ಚಿತ್ರವನ್ನು ಕಣ್ಮುಂದೆ ತಂದುಕೊಂಡು ದಿಗ್ಗಜಬಲಾನ್ವಿತಂ, ಕೆಮ್ಮೀಸೆವೊತ್ತ ಪುಲಿವೊಗದುಗ್ರಗಾತ್ರದಾ ಮಾಯಾ-ಸಮರ್ಥನ್ ಆದಮಾರೀಚನು ಅಶ್ರುಧಾರೆ ಪೊಣ್ಮೆಮೂಗಳ್ಗೆ ಯಳುತ್ತಾನೆ. ಇದೇ ಸಮಯವೆಂದು ರಾವಣನು ಮತ್ತೆ ಮತ್ತೆ ಅವನನ್ನು ಸಂತೈಸಿ ಅನಂತರ ಆ ಶ್ರೀರಾಮನ ಮೇಲೆ ಮುಯ್ಯಿ ತೀರಿಸಿಕೊಳ್ಳಲು ಸೀತೆಯನ್ನು ಅಪಹರಿಸಲು ಸಹಾಯ ಮಾಡಬೇಕೆಂದು ಕೋರುತ್ತಾನೆ. ಇದನ್ನು ಕೇಳುತ್ತಲೇ ಅತೀವ ಚಿಂತ ಮತ್ತು ವ್ಯಥೆಗೆ ಒಳಗಾಗುತ್ತಾ ಮಾರೀಚ ತನ್ನ ನವನೂತನ ವ್ಯಕ್ತಿತ್ವವನ್ನು ಇಲ್ಲಿ ಮೆರೆಯುತ್ತಾನೆ. "ಆ ಮಡದಿಯಾಸೆಯ ಬಿಡು ವೃಥಾ ಕೆಡಬೇಡ, ಸಿರಿ ಕೆಡುವುದು, ಆಯುಷ್ಯ ಹರಿಯುವುದು, ಪರಕೆ ಬಾಹಿರವಿಲ್ಲ ದುರ್ಯಶ, ಪರಸತಿಯ ಸಂಯೋಗ ನರಕದ ಯೋಗ, ಪಾಪೌಘ ತರುಣಿಯರು ನಿನಗಿಲ್ಲವೇ ?, ನರನರಸಿಯೊಬ್ಬಳೇ?

ಚಲುವೆಯಾದಳೇ ನೇದ ಭಾಗ್ಯವನುಣ್ಣು, ಸಾಯುದಿರಕಟಾ ಸಳಿಗಾಗಿ" ಎಂದು ರಾವಣನಿಗೆ ಬೋಧಿಸುತ್ತ ಹೆಣ್ಣಿನ ಬಗ್ಗೆ ಆಡುವ ಮಾತುಗಳನ್ನು ಕೇಳಿದಾಗ ಮಾರೀಚನು ಪರಮವೇದಾಂತಿಯಾಗಿಯೂ, ಧರ್ಮದ ಸಾಕಾರ ಮೂರ್ತಿಯಾಗಿಯೂ ತೋರುತ್ತಾನೆ. ಮತ್ತು ಮೊಂಡುತನ ಮಾಡಿದ ರಾವಣನಿಗೆ 'ರಾಮನಾರೆಂದರಿಯಲಾ, ಸುತ್ರಾಮ ಮುಖ್ಯರ ದೂರಿನಲಿ ಬಳಿಕೀಮಹೀ ಭಾರಕವ ಭಂಜಿಸಲೆಂದು ನರನಾಗಿ ಆ ಮಧುದ್ವಿಷ ನವತರಿಸಿದನು ನೀ ಮರುಳಲಾ ಸುಲಭವೇ ರವಿ ತಾಮಸಿಗೆ, ತಾಮಸವನಂಗೀಕರಿಸಬೇಡ' ಎಂದು ತಾನು ರಾಮನಿಂದ ಹಿಂದೆ ಪಟ್ಟ ಪಾಡನ್ನು ಬಣ್ಣಿಸಿ ಅವನು ಪರಮಾತ್ಮನ ಅವತಾರ ಎಂಬುದನ್ನು ಭೋಧಿಸಿ ಆ ಧರ್ಮಪುರುಷನನ್ನು ಜಯಿಸಲು ಬರಿಯ ಬಲ್ಮೆಯಿಂದ ಆಗದು ಎಂದು ವಿವೇಕ ಪೂರ್ಣನಾಗಿ ಮಾತನಾಡುತ್ತಾನೆ. ಮತ್ತು ಶ್ರೀರಾಮನನ್ನು ಧರ್ಮದಿಂದಲೇ ಜಯಿಸಬೇಕೆಂದು ತಾನು ತಾಪಸವೃತ್ತಿಯನ್ನು ಕೈಗೊಂಡುದಾಗಿ ವಿವರಿಸುತ್ತಾನೆ. 'ಸೀತೆ, ಸಿಕ್ಕಿದಡಕ್ಕೆಲರಿಯಳು ಸತ್ಯವಿದು' ಎಂದು ಹೇಳುತ್ತ "ಬೇಡಮಗನೇ ಹರಿ ವಿರೋಧ ಇರುವ ಮುನಿ ಪೌಲಸ್ತ್ಯ ವಂಶದ ಮೆರೆವ ಜವ್ವನ ಚಾರಣವನಿತೆಯ ತುರುಬ ಬೋಳಿಸಬೇಡ" ಎಂದು ದೈನ್ಯತೆಯಿಂದ ಬೇಡಿಕೊಳ್ಳುತ್ತಾನೆ. ಮಾರೀಚನ ಮುಂದಾಲೋಚನೆ ಅವನ ಪ್ರಜ್ಞೆಯ ಆಳ, ಈ ಮಾತಗಳಿಂದ ವ್ಯಕ್ತವಾಗುತ್ತದೆ. ಅಲ್ಲಿಗೂ ರಾವಣನು ತನ್ನ ನಿರ್ಧರವನ್ನು ಬದಲಾಯಿಸದೇ ಇರಲು ಸಿಟ್ಟಿನಿಂದಲಾದರೂ ದಾರಿಗೆ ತರಬೇಕೆಂದು ಪ್ರಯತ್ನಿಸುತ್ತಾನೆ 'ಅಕಟ ಮರುಳಾದೆಯಂತು ನಿಶಾಚ ಪ್ರಕಚ ವಂಶಾರಣ್ಯದಲ್ಲಿ ಪಾವಕನ ಪಸರಿಸಬೇಡ' ಎಂದು ಬುದ್ಧಿವಾದ ಹೇಳುತ್ತಾನೆ. ಇದುವರೆಗೆ ಮಾವನೆಂದು ಗೌರವ ಕೊಟ್ಟಿದ್ದ ರಾವಣನು ಸಿಟ್ಟಿಗೇಳುತ್ತಾನೆ ತನಗೆ ಸಹಾಯ ಮಾಡದಿದ್ದರೆ ಅವನನ್ನು ಕೊಲ್ಲುವುದಾಗಿ ಬೆದರಿಕೆ ಹಾಕುತ್ತಾನೆ. ಇಲ್ಲಿ ಮಾರೀಚನ ಸೂಕ್ಷ್ಮಮತಿ ಮತ್ತೆ ಕೆಲಸ ಮಾಡುತ್ತದೆ ಪರಮಾತ್ಮ ಸ್ವರೂಪನೂ, ಪರಮಶ್ರೇಷ್ಠನೂ ಆದ ರಾಮನ ಕೈಯಿಂದ ಸತ್ತರೆ ತನಗೆ ನರಕವಿಲ್ಲೆಂದು ಭಾವಿಸುತ್ತಾನೆ. , ಅಸುರನಿವನಾಸುರವಿಕರ್ಮವನೆಸಗಲ್ಲದೆ ಸುಮನಸರಿಂಗೆ ಸವಿಸ್ತರಿಸು ಮಾಣಸದಿಂದವೆನ್' ಎಂದು ಕಾರ್ಯಕ್ಕೆ ಮುಂದಾಗುತ್ತಾನೆ. ಆ ರಾಕ್ಷಸ ಕುಲಾಧೀಶ್ವರನ ದುಶ್ಚಿಂತದ ದುರಾಗ್ರಹಕ್ಕೆ ಮನದಲ್ಲಿಯೇ ಘಾಸಿಪಡುತ್ತಿದ್ದರೂ ಅವನ ಮೇಲಿನ ಮಮತೆಯಿಂದ 'ಅಸುರವಂಶದ ಶರಿಯು ಬೆಳಗು' ಎಂದು ಆಶೀರ್ವದಿಸಿ ತನ್ನ ಅಂತಿಮ ಪಾತ್ರಕ್ಕೆ ವೇಷ ಹಾಕುತ್ತಾನೆ. ತನ್ನ ರಾಕ್ಷಸೀ ದೇಹದೊಳಗಿನ ಆತ್ಮನನ್ನು ಬೇರ್ಪಡಿಸಿಕೊಂಡು ಪರಮಾತ್ಮನ ಪಾದಾರವಿಂದವನ್ನು ಹೊಂದಲು ಕಾರಣವಾಗುವಂತಹ ದಾನವೇಂದ್ರನ ದಾನವತ್ವವನ್ನು ಅಂತ್ಯಗೊಳಿಸಿ ಮುಕ್ತಿ ಪಥವನ್ನು ಕರುಣಿಸಲು ಕಾರಣವಾಗುವಂತಹ ಮತ್ತು ವಿಷ್ಣುವಿನ ರಾಮಾವತಾರದ ಮುಖ್ಯ ಧ್ಯೇಯವಾದ ಲೋಕ ಕಲ್ಯಾಣಕ್ಕೆ ಕಾರಣವಾಗುವಂತಹ ಸ್ವರ್ಣ ಜಿಂಕೆಯ ರೂಪವನ್ನು ತಾಳಿ ಸೀತಾ ಮಾತೆಯ ಮುಂದೆ ಸುಳಿದು ರಾಮನನ್ನು ಬಹು ದೂರ ಕೊಂಡೊಯ್ದು, ರಾಮನ ಬಾಣಕ್ಕೆ ತುತ್ತಾಗಿ ರಾವಣನ ಜನ್ಮದ ಚರಮಗೀತೆಯೋ ಎಂಬಂತೆ 'ಓ ಲಕ್ಷ್ಮಣ ಓ ಸೀತೆ' ಎಂದು ಕೂಗಿ ಅಸುನೀಗುತ್ತಾನೆ. ಪರಮಾತ್ಮನನ್ನು ಒಲಿಸಿಕೊಳ್ಳಲು ಬಹು ಕಾಲ ತಪಗೈದರೂ 'ಒಲಿದು ಕೊಡುವುದಕ್ಕಿಂತ ಮುನಿದರೇ ಅತಿಲೇಸು' ಎನ್ನುವ ಹಾಗೆ ಶ್ರೀರಾನನ್ನು ಮುನಿಸುಗೊಳಿಸಿ, ಕರ್ತವ್ಯವನ್ನು ಪೂರ್ಣಗೊಳಿಸಿ, ಕೈವಲ್ಯ ಪದವಿಯನ್ನು ಹೊಂದುತ್ತಾನೆ ಮಾರೀಚ.

ಮಾರೀಚನ ಪಾತ್ರದಲ್ಲಿ ಬರುವ ಅವನ ಗುಣ-ಶೀಲಗಳೂ, ರೀತಿ-ನೀತಿಗಳೂ ಮತ್ತು ಅವನಿಂದಾಗಿರುವ ಪ್ರಯೋಜನಗಳೂ ಅಪಾರ -ಅಮೂಲ್ಯ ರಾಮಾಣದ ಕಥೆಯ ಉದ್ದಕ್ಕೂ ಇವನ ಪಾತ್ರದಿಂದಾಗಿರುವ ಪ್ರಯೋಜನವನ್ನು ಕೂಲಂಕುಷವಾಗಿ ನೋಡಿದರೆ ಇವನಿಲ್ಲದಿದ್ದರೆ. ರಾಮಾಯಣವೇ ನಡೆಯುತ್ತಿರಲಿಲ್ಲವೇನೋ ಎನಿಸುತ್ತದೆ ಒಟ್ಟಿನಲ್ಲಿ ಮಾರೀಚನು ರಾಕ್ಷಸನಾಗಿ ಜನ್ಮ ತಾಳಿದರೂ ತಾಪಸಿಯಾಗಿ ಜನ್ಮ ಸಫಲ ಕರ್ತವ್ಯವನ್ನು ಸಾಂಗಗೊಳಿಸಿ, ಪರಮಾತ್ಮನ ಕೈಯಿಂದಲೇ ಮುಕ್ತಿ ಪದವನ್ನು ಹೊಂದಿ, ರಾಮಾಯಣದ ಜೀವನಾಡಿಯಾಗಿ ಪ್ರತಿಯೊಬ್ಬರೂ ಸ್ಮರಿಸಬೇಕಾದ ಮಹಾನ್ ವ್ಯಕ್ತಿಯಾಗಿ ಚಿತ್ರಿತನಾಗಿದ್ದಾನೆ. —

# ಸ್ವಾಮಿ ವಿವೇಕಾನಂದರು

— ಕೆ. ಎನ್. ಸ್ವಾಮಿ.

ಭಾರತೀಯ ಸಂಸ್ಕೃತಿ ವಿಶ್ವವಂದ್ಯವಾಗಲು, ಉದೆಷ್ಟೋ ಮಂದಿ ತಮ್ಮ ಸರ್ವಸ್ವವನ್ನೂ ತೃಣೀಕರಿಸಿ ದುಡಿದ ಫಲವೆಂಬುದು ಒಪ್ಪತಕ್ಕ ಮಾತಾಗಿದೆ. ಇಂತಹ ಧರ್ಮಪ್ರೇಮಿಗಳಲ್ಲಿ ಶ್ರೀ ವಿವೇಕಾನಂದರ ಹೆಸರು ಚಿರಸ್ಥಾಯಿಯಾಗಿದೆ.

ಪುಣ್ಯಾತ್ಮರಾದ ವಿವೇಕಾನಂದರು 12.1.1863 ರಂದು ವಿಶ್ವನಾಥದತ್ತರು ಹಾಗೂ ಭುವನೇಶ್ವರಿ ದೇವಿಯವರ ಪುತ್ರರತ್ನರಾಗಿ ಜನಿಸಿದರು. ಬಾಲ್ಯದಲ್ಲಿ ವೀರೇಶ್ವರ, ನರೇಂದ್ರ, ನರೇಂದ್ರನಾಥ ಎಂದು ಹೆಸರಿದ್ದವು. 'ಬೆಳೆಯುವ ಪೈರು ಮೊಳಕೆಯಲ್ಲಿ' ಎಂಬಂತೆ ನರೇಂದ್ರನ ಬಾಲಲೀಲೆ ವರ್ಣಿಸಲಸದಳವಾಗಿತ್ತು. ತಾಯಿ ಭುವನೇಶ್ವರಿ ದೇವಿಯವರು ಪ್ರೀತಿಯ ದ್ಯೋತಕವಾಗಿ ಮಗನನ್ನು 'ನರೇನ್', ಎಂದೇ ಸಂಬೋಧಿಸುತ್ತಿದ್ದರು. ಬಾಲಕ ನರೇಂದ್ರನಿಗೆ 'ಶಿವಮಂತ್ರ' ಅಮಿತಾನಂದವನ್ನುಂಟು ಮಾಡುತ್ತಿತ್ತು.

ವಿವೇಕಾನಂದರು, ಮಾತೆಯ ಅನಂತ ಆಶೀರ್ವಾದವೇ ತಮ್ಮ ಅಭ್ಯುದಯಕ್ಕೆ ನಾಂದಿಯೆಂದು ಬಗೆದಿದ್ದರು. "ತಾಯಿಯನ್ನು ಪೂಜಿಸದ ಪಾಪಿಯೊಬ್ಬನೂ ಕೀರ್ತಿವಂತನಾಗಿಲ್ಲ." ಎಂಬ ವಿವೇಕಾನಂದರ ವಾಣಿ ನಿತ್ಯ ಸತ್ಯವಾಗಿದೆ. ಶಾಲೆಯಲ್ಲಿ ಲೆಖ್ಖವೊಂದನ್ನು ಬಿಟ್ಟರೆ ಉಳಿದ ವಿಷಯಗಳನ್ನು ತಿಳಿಯುವುದರಲ್ಲಿ ಆಸಕ್ತಿ ಹೊಂದಿದ್ದರು. ಗಣಿತವನ್ನು 'ಕೋಮಟಿಗಳ ಕವಡು ಬಿಜ್ಜೆ' ಎಂದು ಕರೆಯುತ್ತಿದ್ದರು. ರಾಯಪುರದಲ್ಲಿ ವಿವೇಕಾನಂದರು ತಂದೆಯಿಂದಲೇ ವಿದ್ಯಾಭ್ಯಾಸ ಪಡೆದು ಗ್ರಂಥಾಧ್ಯಯನವನ್ನು ಮಾಡಿದರು. ಬಾಲ್ಯದಿಂದಲೇ ಪಾಕಶಾಸ್ತ್ರವು ವಿವೇಕಾನಂದರಿಗೆ ಕರತಲಾ ಮಲಕವಾಗಿತ್ತು. ಬಂಗಾಳಿ ಭಾಷೆಯ ಸರ್ವತೋಮುಖ ಸಾಹಿತ್ಯವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿದರು. 16ನೇ ವಯಸ್ಸಿಗೆ ನೀರು ಕುಡಿದಂತೆ ಆಂಗ್ಲ ಭಾಷೆಯಲ್ಲಿ ಉಪನ್ಯಾಸ ಮಾಡುವಷ್ಟು ಶಕ್ತಿ ಗಳಿಸಿಕೊಂಡಿದ್ದರು. ನನ್ನ ಸಫಲ ಜೀವನಕ್ಕಾಗಿ ಶ್ರೀ ಭುವನೇಶ್ವರಿ ಮಾತೆಗೆ ಚಿರಋಣಿಯಾಗಿದ್ದೇನೆ ಎಂದು ಆಗಾಗ ಹೇಳುತ್ತಿದ್ದರು.

ವಿವೇಕಾನಂದರು ತಮ್ಮ 16ನೆಯ ವಯಸ್ಸಿಗೆ ಕಾಲೇಜಿಗೆ ದಾಖಲಾದರು. ಅಲ್ಲೂ ನೇರ ಮಾರ್ಗವನ್ನು ಅನುಸರಿಸುತ್ತಿದ್ದರು. ಅಡ್ಡದಾರಿಗರನ್ನು ಕಂಡರೆ ಖಂಡ ತುಂಡವಾಗಿ ಛೀಮಾರಿ ಹಾಕುತ್ತಿದ್ದರು. ಕುಸುಮದಷ್ಟು ಕೋಮಲವೂ ವಜ್ರದಷ್ಟು ಕಠಿಣವೂ ಆದ ವ್ಯಕ್ತಿತ್ವ ನಿರ್ಮಾಣವಾಗತೊಡಗಿತು. ಆಟ ಪಾಠಗಳೆರಡೂ ಒಟ್ಟಿಗೆ ಸಾಗಿದವು. ಧರ್ಮದ ಆಸ್ಥೆ ಮೂಡಿತು. ಈಶ್ವರವಾದ ನಿರೀಶ್ವರ ವಾದಗಳ ಬಗ್ಗೆ ವಿಚಾರ ಮಂಥನ ಪ್ರಾರಂಭವಾಯಿತು.

ಈಶ್ವರನನ್ನು ಕಾಣಲೇಬೇಕೆಂದು ನಿಶ್ಚಯಿಸಿದರು.

ವೇದೋಪನಿಷತ್ತುಗಳ, ತರ್ಕ ಮೀಮಾಂಸೆಗಳ ಅಧ್ಯಯನ ಸಾಗಿತು. 'ದೇವರು, ಧರ್ಮ' ಇವುಗಳ ಮೂಲವನ್ನು ಅರ್ಥ ಮಾಡಿಕೊಳ್ಳಲು ಮಾರ್ಗಾನ್ವೇಷಣೆಗೆ ತೊಡಗಿದರು.

ವಿವೇಕಾನಂದರು ಮದುವೆ ಮಾಡಿಕೊಳ್ಳಲು ಒಪ್ಪಲಿಲ್ಲ. ತಮ್ಮ ಬಹುದಿನದ ಬಯಕೆಯಂತೆ 1882ರಲ್ಲಿ ಶ್ರೀ ರಾಮಕೃಷ್ಣ ಪರಮಹಂಸರನ್ನು ಭೇಟಿಯಾದರು. ದೇವರ ಬಗ್ಗೆ ನೂರಾರು ಪ್ರಶ್ನೆಗಳನ್ನು ಹಾಕಿ ಉತ್ತರ ಪಡೆದರು. ದೇವರನ್ನು ತೋರಿಸುತ್ತೀರಾ ಎಂದು ರಾಮಕೃಷ್ಣರನ್ನು ಕೇಳಿದಾಗ 'ನಾನೂ ನೋಡಿದ್ದೇನೆ, ನಿನಗೂ ತೋರಿಸುತ್ತೇನೆ' ಎಂದಾಗ ವಿವೇಕಾನಂದರು ಅವಾಕ್ಕಾದರು. ದಕ್ಷಿಣೇಶ್ವರಕ್ಕೆ ಅನೇಕಬಾರಿ ಬಂದರು. ತಮ್ಮ ಸಂಶಯಗಳನ್ನು ನಿವಾರಿಸಿಕೊಳ್ಳತೊಡಗಿದರು. ಬೆಳಕನ್ನು ದರ್ಶಿಸಿದರು. ಸರ್ವ ಧರ್ಮಗಳ ಅಂತರಾಳವನ್ನು ಹೊಕ್ಕರು. ಗುರು–ಶಿಷ್ಯರ ಬಾಂಧವ್ಯ ಭವ್ಯವಾಗಿ ಬೆಳೆಯತೊಡಗಿತು. ಒಮ್ಮೆ ನರೇಂದ್ರರು ಬಹಳ ದಿನ ಬರದಿದ್ದಾಗ ರಾಮಕೃಷ್ಣರೇ ಹುಡುಕಿಕೊಂಡು ಕಲ್ಕತ್ತಾಕ್ಕೆ ಹೋಗಿದ್ದರಂತೆ. ಅನಿತ್ಯವಾದ ಸಂಸಾರದಿಂದ ನಿತ್ಯವಾದ ಜ್ಯೋತಿಯೆಡೆಗೆ ವಿವೇಕಾನಂದರು ಸಾಗತೊಡಗಿದ್ದರು.

ವಿಶ್ವನಾಥದತ್ತರು ಇಹಲೋಕ ತ್ಯಜಿಸಿದಾಗ ವಿವೇಕಾನಂದರು ಹಣಕ್ಕಾಗಿ ಪರಿತಪಿಸಬೇಕಾಯಿತು. ಅಂತ್ಯಕ್ರಿಯೆಗೂ ಕಷ್ಟವಾದ ಪರಿಸ್ಥಿತಿಯಿತ್ತು. ಉದ್ಯೋಗವನ್ನರಸಲು ಪ್ರಾರಂಭಿಸಿದರೂ ಏಕೋ ಇವರ ಮನಸ್ಸು ತಾಕಲಾಟಕ್ಕೆ ಸಿಕ್ಕಿತು. ಸಂನ್ಯಾಸ ಸ್ವೀಕರಿಸಲು ನಿಶ್ಚಯಿಸಿದರು. ತಂದೆಗೆ, ಮಗ ವಕೀಲನಾಗಬೇಕೆಂಬ ಆಸೆ ಇದ್ದಿತು. ವಿದ್ಯಾಸಾಗರ ಪಾಠಶಾಲೆಯಲ್ಲಿ ಗುರುವಾದರು. ಸಾಧನೆ ಮುಂದುವರೆಯುತ್ತಿತ್ತು. ಶ್ರೀ ಪರಮಹಂಸರ ಶಿಷ್ಯರಲ್ಲಿ ಅಗ್ರಗಣ್ಯರಾದರು. 16–8–1886 ರಂದು ಪರಮಹಂಸರು ಶಿವ ಸಾಯುಜ್ಯವನ್ನು ಪಡೆದಮೇಲೆ ವಿವೇಕಾನಂದರ ಹೊಣೆಗಾರಿಕೆ ಇಮ್ಮಡಿಯಾಯಿತು. ಶ್ರೀರಾಮಕೃಷ್ಣ ಸಂಘದ ಕಾರ್ಯವನ್ನು ತಮ್ಮ ಹೆಗಲಿಗೆ ಏರಿಸಿಕೊಂಡರು. ಪರೋಪಕಾರವೇ ಸಂಘದ ಪರಮೋಚ್ಚ ಧ್ಯೇಯವಾಯಿತು. ನರೇಂದ್ರರು 1888 ರಲ್ಲಿ ನಿಜವಾದ ಸನ್ಯಾಸತ್ವಕ್ಕೆ ಕಾಲಿಟ್ಟರು. ಕಾಯೇನವಾಚಾ ಪರಿವ್ರಾಜಕರಾಗಿ ಸ್ವಾಮಿ ವಿವೇಕಾನಂದರಾಗಿ ರಾರಾಜಿಸತೊಡಗಿದರು.

ಅಖಂಡ ಭಾರತವನ್ನು ದರ್ಶಿಸುವ ಆಕಾಂಕ್ಷೆಯಿಂದ ಶ್ರೀ ಮಾತೆ ಶಾರದಾಮಣಿ ದೇವಿಯವರ ಆಶೀರ್ವಾದ ಪಡೆದು ಆಲ್ಮೋರ, ಹೃಷಿಕೇಶ, ಹರಿದ್ವಾರ ರಾಮೇಶ್ವರಗಳನ್ನು ನೋಡಿಕೊಂಡು 1893 ರಲ್ಲಿ ಕನ್ಯಾಕುಮಾರಿಗೆ ತೆರಳಿದರು. ಮದರಾಸಿನಲ್ಲಿ ಇವರ ಉಪದೇಶಾಮೃತವನ್ನು ಸವಿದ ಭಕ್ತ ಕೋಟಿಯ ಇಚ್ಛೆಯಂತೆ ಹಾಗೂ ತಮ್ಮ ಬಹುದಿನಗಳ ಬಯಕೆಯಂತೆ ಸಂಯುಕ್ತ ಸಂಸ್ಥಾನದಲ್ಲಿ ನಡೆಯಲಿದ್ದ 'ವಿಶ್ವ ಧರ್ಮ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಲು ನಿಶ್ಚಯಿಸಿದರು.

ಶ್ರೀ ರಾಮಕೃಷ್ಣರ ಆಶೀರ್ವಾದವನ್ನು ಶಿರೋಧಾರಣೆ ಮಾಡಿಕೊಂಡು ವೇದ ಭೂಮಿಯಿಂದ ಪ್ರಯಾಣಮಾಡಿದರು. ಖೇತ್ರೀಯ ಮಹಾರಾಜರಿಂದ ಕೊಡಲ್ಪಟ್ಟಿದ್ದ ಕಾವಿಯುಡುಗೆಯನ್ನು ಧರಿಸಿ ಚಿಕಾಗೋಗೆ ಪ್ರಯಾಣ ಬೆಳೆಸಿದರು. 11-9-1893 ರಂದು ವಿಶ್ವಧರ್ಮ ಸಮ್ಮೇಳನದಲ್ಲಿ 'ಭ್ರಾತೃ-ಭಗಿನಿಯರೇ' ಎಂದು ಸಂಬೋಧಿಸಿದಕೂಡಲೇ, ಕಿವಿ ಕಿವುಡಾಗುವಷ್ಟು ಕರತಾಡನದ ಧ್ವನಿ ಮುಗಿಲು ಮುಟ್ಟಿತು. ಆ ಬೃಹತ್ ಶಾಂತಿ ಸಮ್ಮೇಳನದಲ್ಲಿ ಭಾರತೀಯ ಸಂಸ್ಕೃತಿಯ ರೂಪರೇಷೆಗಳನ್ನು ಅರ್ಥಪೂರ್ಣವಾಗಿ ಪ್ರತಿಪಾದಿಸಿದರು. ವಿಶ್ವಧರ್ಮಕ್ಕೆ, ವಿಶ್ವಶಾಂತಿಗೆ ಭಾರತದ ಕೊಡುಗೆ ಏನೆಂಬುದನ್ನು ಸಹಸ್ರ ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿದರು. ಹಿಂದೂಧರ್ಮದ ಅಂತರಾತ್ಮವನ್ನು ದರ್ಶನ ಮಾಡಿಸಿದರು. ಅಮೇರಿಕಾದ ಒಂದು ಪತ್ರಿಕೆ "ಸರ್ವಧರ್ಮ ಸಮ್ಮೇಳನದಲ್ಲಿ ವಿವೇಕಾನಂದರೇ ಶ್ರೇಷ್ಠತಮವ್ಯಕ್ತಿ, ಅವರ ಭಾಷಣಗಳನ್ನು ಕೇಳಿದ ಮೇಲೆ ಇಂತಹ ಸುಸಂಸ್ಕೃತ ದೇಶದ ಜನಾಂಗಕ್ಕೆ ಉಪದೇಶವೀಯಲು ಧರ್ಮ ಪ್ರಚಾರಕರನ್ನು ಕಳುಹಿಸುವುದು ಶುದ್ಧ ಮೂರ್ಖತನ" ಎಂದು ವರದಿ ಮಾಡಿತು.

---

ಪ್ಯಾರಿಸ್, ಮೂಲಕ ಇಂಗ್ಲೆಂಡಿಗೆ ಬಂದ ವಿವೇಕಾನಂದರಿಗೆ ನಿವೇದಿತಾರವರ ಪರಿಚಯವಾಯಿತು. ಅವರನ್ನು ಶಿಷ್ಯರನ್ನಾಗಿ ಸ್ವೀಕರಿಸಿದರು. ನ್ಯೂಯಾರ್ಕಿನಲ್ಲಿ "ಭಕ್ತಿಯೋಗ" ವನ್ನು ಕುರಿತು ಮಾತನಾಡಿದರು. ಲಂಡನ್‌ನಲ್ಲಿ ಮ್ಯಾಕ್ಸ್‌ಮುಲ್ಲರ್ ಅವರನ್ನು ಭೇಟಿಮಾಡಿದರು. ವಂದನೆ ಸಲ್ಲಿಸಿದರು. ತಮ್ಮ ಎಲ್ಲ ಉಪನ್ಯಾಸಗಲ್ಲೂ 'ವಿಶ್ವಶಾಂತಿ ಹಾಗೂ ವಿಶ್ವಕಲ್ಯಾಣ' ವನ್ನು ಪ್ರತಿ ಪಾದಿಸಿದ್ದರು.

ಕಲ್ಕತ್ತಾ, ನೈನಿಟಾಲ್, ಆಲ್ಮೋರಗಳ ಮಾರ್ಗವಾಗಿ ಕಾಶ್ಮೀರಕ್ಕೆ ಬಂದು ತಮ್ಮ ಅಪೂರ್ವ ಅನುಭವಗಳನ್ನು ವಿವರಿಸಿದರು. ವಿವೇಕಾನಂದರು ಭಾರತಾಂಬೆಯ ಹೆಮ್ಮೆಯ ಪುತ್ರರಾಗಿ ವಿಶ್ವಖ್ಯಾತಿ ಪಡೆದರು. ವಿವೇಕಾನಂದರು 4-7-1902 ರಂದು ಇಹಲೋಕ ತ್ಯಜಿಸಿದರು. ಆ ಪುಣ್ಯಕಾಯ ಮಹಾಮಹಿಮ ಸ್ವಾಮಿ ವಿವೇಕಾನಂದರ ಆತ್ಮಶಕ್ತಿ ಎಂದೆಂದೂ ಭಾರತೀಯರಿಗೆ ದಾರಿತೋರುವ ದಿವ್ಯಜ್ಯೋತಿಯಾಗಿ ಬೆಳಗಲಿ' —

[ಕೃಪೆ: ಶ್ರೀ ಕುವೆಂಪುರವರ 'ಸ್ವಾಮಿವಿವೇಕಾನಂದ.']

---

## ಕನ್ನಡ ಸೂಕ್ತಿ ಸಂಹಿತೆ

### ಮನಸ್ಸೇ ಕಾರಣ

ಬಂಧನ ಬಿಡುಗಡೆಕೆರಡಕು ಕೂಡ
ಮನುಜಗೆ ಮನವೇ ಕಾರಣ

### ಯತ್ನದ ಮೇಲ್ಮೆ

ದೈವವೇ ಮೇಲೆಂದು ಯೋಚಿಸಿ
ತನ್ನ ಯತ್ನವ ಬಿಡದಿರುವು

### ಪ್ರಾಜ್ಞನ ತ್ಯಾಗ

ಸರ್ವನಾಶ ಒದಗಿ ಬರಲು ಪ್ರಾಜ್ಞ ಅರ್ಧ ಬಿಡುವನು

— ಅಮ್ಮೆಂಬಳ ಶಂಕರ ನಾರಾಯಣ ನಾವಡ.

# ಹೆಣ್ಣಿಗೆ ಸಂಯಮ ಅಗತ್ಯ

—ಜಿ. ಶಾರದಾ ರಾಜಶೇಖರ್

ಸ್ತ್ರೀ ಪುರುಷರಿಗೆ ಸ್ವಭಾವಜನ್ಯವಾದ ಭೇದಗಳಿವೆಯೆ? ಮನಸ್ಸಿನ ಭಾವನೆಗಳು, ಆಲೋಚನಾಶಕ್ತಿ, ಕಾರ್ಯಕುಶಲತೆ, ಇವುಗಳಲ್ಲಿ ಭೇದವಿದೆಯೇ? ಈ ವಿಷಯವಾಗಿ ಮನಶ್ಶಾಸ್ತ್ರಜ್ಞರು ಸ್ವಲ್ಪಮಟ್ಟಿಗೆ ಶೋಧನೆ ನಡೆಸಿದ್ದಾರೆ. ಆದರೆ ಇನ್ನೂ ನಿಷ್ಕೃಷ್ಟವಾದ ಸಿದ್ಧಾಂತಕ್ಕೆ ಯಾರೂ ಬಂದಿಲ್ಲ.

'ಅಲೆಕ್ಸಿಸ್ ಕ್ಯಾರೆಲ್' ಎಂಬ ಪ್ರಾಣಿರಸಾಯನ ಶಾಸ್ತ್ರ ಪ್ರವೀಣನು, ಸ್ತ್ರೀ ದೇಹದ ಜೀವಕಣಗಳಿಗೂ ಪುರುಷ ದೇಹದ ಜೀವಕಣಗಳಿಗೂ ಆಂತರಿಕವಾದ ಭೇದ ಕಂಡು ಬರುತ್ತದೆಯೆಂದಿದ್ದಾನೆ. ಇದು ನಿಜವಾದರೆ, ಮನೋವ್ಯಾಪಾರಗಳಲ್ಲಿಯೂ ಕೂಡ ಭೇದ ಕಾಣಿಸಿಕೊಳ್ಳಬೇಕು. ಈ ದೃಷ್ಟಿಯಿಂದ ಸ್ತ್ರೀ ಪುರುಷರ ಸ್ವಭಾವದಲ್ಲಿ ಭೇದವೇರ್ಪಟ್ಟ ಹಾಗಾಯಿತು.

ಹಿಂದೆ ಹೆಣ್ಣು ಸಾಮಾನ್ಯವಾಗಿ ನಾಲ್ಕು ಗೋಡೆಗಳ ಮಧ್ಯೆ ಜೀವಿಸುತ್ತಿದ್ದಳು. ಗೃಹ ನಿರ್ವಹಣೆ, ಮಕ್ಕಳ, ಪತಿಯ, ಹಿರಿಯರ ಸೇವೆಯೇ ಅವಳ ಜೀವಿತದ ಉದ್ದೇಶ್ಯವಾಗಿತ್ತು. ಕಾಲ ಬದಲಾದಂತೆ, ಸ್ತ್ರೀ ವಿದ್ಯಾವತಿಯಾಗತೊಡಗಿದಳು. ಸಮಾಜದ ಎಲ್ಲ ಕ್ಷೇತ್ರಗಳಲ್ಲಿಯೂ ದುಡಿಯತೊಡಗಿದ್ದಾಳೆ. ಹಿಂದಿ ಕಾಲದ ಹೆಣ್ಣಿಗಿಲ್ಲದ ಅನೇಕ ಸಮಸ್ಯೆಗಳನ್ನು ಈಗಿನ ಕಾಲದ ಹೆಣ್ಣುಮಕ್ಕಳು ಎದುರಿಸಬೇಕಾಗಿದೆ. ಸಂಪ್ರದಾಯದ ಕೊಂಡಿಯನ್ನು ಪೂರ್ತ ಕಳಚಿ ಹೊರಡಲು ನಮ್ಮ ಭಾರತೀಯ ಹೆಣ್ಣು ಮಕ್ಕಳು ಸಿದ್ಧರಿಲ್ಲ. ಸಂಪ್ರದಾಯಬದ್ಧ ರೀತಿ ನೀತಿಗಳ ಜೊತೆಗೆ ನವೀನ ಮನೋಭಾವಗಳನ್ನು ಮೈಗೂಡಿಸಿಕೊಂಡು ನಡೆಯಬೇಕಾಗಿದೆ. ಹೀಗಾಗಿ ಇಂದಿನ ಹೆಣ್ಣಿನ ಮನಸ್ಸು ಡೋಲಾಯಮಾನ ಸ್ಥಿತಿಯಲ್ಲಿದೆ ಎಂದರೆ ತಪ್ಪಾಗದು.

ಸ್ತ್ರೀ ವಿದ್ಯಾವತಿಯಾಗಿ ಎಲ್ಲ ಕ್ಷೇತ್ರಗಳಲ್ಲೂ ದುಡಿಯ ಹೊರಟಿರುವುದರಿಂದ, ಸ್ತ್ರೀ ಪುರುಷರ ಸಹವಾಸವು ಸಮಾಜದ ಎಲ್ಲ ಕ್ಷೇತ್ರಗಳಲ್ಲಿಯೂ ತಡೆಯಿಲ್ಲದೆ ಬೆಳೆಯುತ್ತದೆ. ಒಂದೇಕಡೆ ಉದ್ಯೋಗ ಮಾಡಬೇಕಾಗಿದೆ. ಸ್ತ್ರೀಪರಪುರುಷರೊಡನೆ ಸಹಜವಾಗಿ ಮಾತಾಡಲೇ ಬೇಕು. ಹೊಸದರಲ್ಲಿ ಪರಪುರಷರೊಡನೆ, ಮಾತನಾಡಬೇಕಾದಾಗ ಸ್ತ್ರೀ ಸಹಜಗುಣವಾದ ನಾಚಿಕೆಯಿಂದಾಗಿ ಅವಳು ಸಂಕೋಚ ವ್ಯಕ್ತಪಡಿಸುವಳು; ಆದರೆ ಕಾಲಕ್ರಮೇಣ ಅವಳಲ್ಲಿನ ಈ ನಾಚಿಕೆಯ ಸ್ವಭಾವ ಅವಳಿಂದ ಮಾಯವಾಗತೊಡಗುವುದು. ಜೊತೆಗೆ ಗಂಡಸರ ಜೊತೆ ಕರ್ತವ್ಯನಿರತರಾಗುವುದರಿಂದ, ಅವರಿಗೂ ಗಂಡಸರ ಮನೋಧರ್ಮವೂ, ಆ ಕಸುಬಿನ ಮನೋಧರ್ಮವೂ ಬರುವುದು ಸಹಜ.

ಹೆಣ್ಣು ಸ್ವಭಾವತಃ ಭಾವನಾ ಜೀವಿ.

ಇದು ಅವಳ ನೈಜಗುಣವೆಂದರೂ ತಪ್ಪಾಗದು. ಜೊತೆಗೆ ಹೆಣ್ಣು, ಪುರುಷನ ಹೊಗಳಿಕೆಗೆ ಬಲಿ ಬಹುಬೇಗ ಬಲಿಯಾಗುವಳು. ಹೆಣ್ಣನ್ನು ಹೊಗಳಿ ಅಟಕ್ಕೇರಿಸಿ, ಸ್ವಾರ್ಥ ಸಾಧಿಸಿಕೊಳ್ಳುವ ಪುರುಷರಿಂದ ಎಚ್ಚರವಾಗಿರದಿದ್ದರೆ ಅವಳು ಅವರ ಬಲೆಗೆ ಬಿದ್ದು ಅನಂತರ ಪಶ್ಚಾತಾಪದ ಬೆಂಕಿಯಲ್ಲಿ ಬೆಂದು ವಿಲಿ ವಿಲಿ ಒದ್ದಾಡುವಳು. ಹೆಣ್ಣು ಹಿಂದಿಗಿಂತ ಈಗ ತನ್ನ ಮನಸ್ಸನ್ನು ಸಂಯಮದಿಂದ ಕಾಪಾಡಿಕೊಳ್ಳುವ ಹೊಣೆ ಅಧಿಕವಾಗಿದೆ.

ಹೆಣ್ಣು ಯಾವ ಕ್ಷೇತ್ರಕ್ಕೇ ಹೋಗಲಿ ಕಾಮಪಿಪಾಸೆಯ ಗಂಡುಗಳ ದೃಷ್ಟಿಯನ್ನೆದುರಿಸಿ ಅವರ ಕುತ್ಸಿತ ಬಲೆಗೆ ಬೀಳದೆ ಬಾಳಬೇಕಾಗಿದೆ. ಹೆಣ್ಣಿಗೆ ಶೀಲವೇ ಎಲ್ಲಕ್ಕಿಂತ ದೊಡ್ಡ ಆಸ್ತಿ. ಭಾರತ ನಾರಿಯ ಮೇಲ್ಮೆ ಅವಳ ಶೀಲ ಸಂರಕ್ಷಣೆಯಲ್ಲೇ ಅಡಗಿದೆ. ಇಂದು, ಎಲ್ಲ ಕ್ಷೇತ್ರಗಳಲ್ಲಿ ಅವಿವಾಹಿತಹೆಣ್ಣು ದುಡಿಯಲಿಕ್ಕೆ ಬರುತ್ತಿರುವುದನ್ನು ಕಾಣುತ್ತಿದ್ದೇವೆ. ವರದಕ್ಷಿಣೆಯ ಪೆಡಂಭೂತದಿಂದ ಅನೇಕ ಹೆಣ್ಣುಮಕ್ಕಳ ವಿವಾಹ ದೂರ ದೂರಕ್ಕೆ ಹೋಗುತ್ತಿದೆ. ಇತ್ತ ವಿವಾಹವೂ ಆಗದೆ ಜೀವನಕ್ಕೆ ಒಂದು ದಾರಿ ಕಂಡುಕೊಳ್ಳಬೇಕೆಂಬ ಬಯಕೆಯಿಂದ ಹೆಣ್ಣು ಉದ್ಯೋಗಕ್ಕೆ ಶರಣು ಹೋಗುತ್ತಾಳೆ. ತುಂಬು-ಜವ್ವನೆಯಾದ ಹೆಣ್ಣು ಪ್ರಕೃತಿ ಸಹಜವಾದ ಆಸೆ-ಆಕಾಂಕ್ಷೆಗಳನ್ನು ಹತ್ತಿಕ್ಕಿ ಮನವೆಂಬ ಮರ್ಕಟಕ್ಕೆ ಭದ್ರವಾದ ಗೋಡೆಯನ್ನು ಹಾಕಿನಡೆಯುದು ಕಷ್ಟ. ಪ್ರಕೃತಿ, ಪರಿಸರ, ಎರಡೂ ಅವಳಿಗೆ ಪ್ರಚೋದನೆ ನೀಡುತ್ತವೆ. ಅಪ್ಪಿ ತಪ್ಪಿ ಅವಳು ಕಾಲುಜಾರಿದ-ಳೆಂದರೆ, ಸಮಾಜದ ಕುಹಕ ನುಡಿಗಳಿಗೆ ಬಲಿಯಾಗುವುದರ ಜೊತೆಗೆ ಅಂತಹ ಹೆಣ್ಣನ್ನು ವಿವಾಹ-ವಾಗಲು ಯಾವ ಗಂಡೂ ಮುಂದೆಬರದೆ ಅವಳನ್ನು ನಂಬಿಸಿ ಮೋಸ ಮಾಡುವವನೂ ಅವಳಿಂದ ದೂರ ದೂರ ಸರಿಯುತ್ತಾನೆ. ವಿವಾಹಕ್ಕೆ ಮುನ್ನ ಯಾವ ಗಂಡಿಗಾದರೂ ಅತಿಸಲುಗೆ ನೀಡುವುದು ಹೆಣ್ಣಿಗೆ ತರವಲ್ಲ. ಹೆಣ್ಣನ್ನು ವಂಚಿಸಿ ದೂರ ಸರಿದ ಗಂಡುಗಳ ಕಥೆಯನ್ನು ದಿನ ನಿತ್ಯ ನಾವು ಅಲ್ಲಿ ಇಲ್ಲಿ ಕೇಳುತ್ತಿರುತ್ತೇವೆ. ತಪ್ಪುಮಾ-

## ಸುಭಾಷಿತ

ದುರ್ಜನರು ಬೈದಾಗ ಮರು ನುಡಿಯ ಬೇಡ. ಕೇಳಿಯೂ ಕೇಳದೆನೆ ಮುನ್ನಡೆಯೆ ಜಾಣ. ಕತ್ತೆಯೊಂದೊದೆದಾಗ ಸುಮ್ಮನಿರದಿರದೆ ಮತ್ತದಕೆ ಒದೆಯಲಾಗದದೆ ರೀತಿ ಕಾಣ.

— [ಸಂಗ್ರಹ] ಎಸ್.ವಿ ವಾಗೀಶ್ವರಭಟ್ಟ.

ಡಿದ ಗಂಡನ್ನು ಕ್ಷಮಿಸುವ ಸಮಾಜ, ಅದೇ ತಪ್ಪನ್ನು ಮಾಡಿದ ಹೆಣ್ಣನ್ನು ಅವಹೇಳನ ಮಾಡುವಲ್ಲಿ ತುಂಬಾ ಮುಂದಾಗಿರುತ್ತದೆ.

ವಿವಾಹಿತ ಹೆಣ್ಣಾದರೂ ದುಡಯಲಿಕ್ಕೆ ಹೊರಗೆ ಹೊರಟಮೇಲೆ ಸಂಯಮದಿಂದ ಇರಬೇ-ಕಾಗುತ್ತದೆ. ಪತಿಯ ನಂಬಿಕೆಗೆ ಅರ್ಹಳಾಗಿ ಬಾಳ್ವೆ ನಡೆಸಬೇಕು. ಇಲ್ಲದಿದ್ದರೆ ದಾಂಪತ್ಯ ವಿಚ್ಛೇಧನ ಪ್ರವೃತ್ತಿಯ ಪ್ರಾಬಲ್ಯ ಅಧಿಕವಾಗತೊಡಗುತ್ತದೆ. ಮದುವೆಯೆಂಬುದರ ಅರ್ಥಕ್ಕೆ ನಾಶಸಂಭವಿಸುವ ಕಾಲ ಹತ್ತಿರಕ್ಕೆ ಬರಹತ್ತಿದೆ. "ಸ್ತ್ರೀ ಪುರುಷರ ಸಮಾಗಮದ ವಿಷಯದಲ್ಲಿರಬೇಕಾದ ಪರಿಶುದ್ಧತೆ ಕೇವಲ ಅಂಧಶ್ರದ್ಧೆಯಿಂದ ಹುಟ್ಟಿದ್ದು ಇಂಥಪರಿಶುದ್ಧತೆ ಇರಬೇಕಾಗಿಲ್ಲ, ಸುಖಸಾಧನೆಯೇ ಜೀವನದ ಗುರಿ" ಎಂಬ ವಾದವು ಈಗೀಗ ಹೆಚ್ಚುತ್ತಿದೆ. ಇದರ ಪರಿಣಾಮ ಅಪಾಯಕಾರಿಯಾದೀತು. ಕೆ-ಲವು ಚರಿತ್ರಕಾರರು ಸ್ತ್ರೀ ಪುರುಷರ ಸಂಗವಿಷಯದಲ್ಲಿ ಒಂದು ತತ್ವವನ್ನು ಗುರುತಿಸಿದ್ದಾರೆ.

ಯಾವ ಕಾಲದಲ್ಲಿ ಇಂದ್ರಿಯನಿಗ್ರಹ ಸಂಪ್ರದಾಯವು ಪ್ರಬಲವಾಗಿದ್ದಿರಬೇಕೆಂದು ತೋರಿಬ-ರುತ್ತದೆಯೋ ಅಂಥಕಾಲಗಳಲ್ಲಿ ಶಾಸ್ತ್ರಕಲೆಗಳಲ್ಲಿ ಅಭಿವೃದ್ಧಿ, ರಾಷ್ಟ್ರೋನ್ನತಿಯನ್ನು ಸಾಧಿಸುವ ಮ-ಹತ್ಕಾರ್ಯಗಳು, ಹೆಚ್ಚಾಗಿ ನಡೆದಿವೆಯೆಂತೆ.

ಪ್ರಕೃತಿ, ಪುರುಷ ಒಂದೆಡೆ ಸೇರಿ ದುಡಿ-ಯುತ್ತಿರುವಾಗ ಒಬ್ಬರಿಂದೊಬ್ಬರು ಆಕರ್ಷಿತರಾಗು

## ನುಡಿಮುತ್ತು

ಕೆಲಸವೇ ಸಂತೋಷವೆನಿಸಿದಾಗ ಇಡೀ ಜೀವನ ಆನಂದವಾಗುತ್ತದೆ. ಕೆಲಸ ಬರೀ ಕರ್ತವ್ಯವೆನಿಸಿದಾಗ ಜೀವನ ಕೇವಲ ಗುಲಾಮಗಿರಿಯಾಗುತ್ತದೆ.

— ಮಾರ್ಕ್ಸಿಂ ಗಾರ್ಕಿ.

ವುದು ಸಹಜವಾದರೂ ಸಹ ಸಂಯಮದ ಗೋಡೆಯನ್ನು ನಿರ್ಮಿಸಿಕೊಂಡು ನಡೆದಾಗಲೇ ಅವರಿಗೂ ಶ್ರೇಯಸ್ಸು ಸಮಾಜಕ್ಕೂ ಶ್ರೇಯಸ್ಸು.

ಸೂಕ್ಷ್ಮ ಪ್ರಕೃತಿಯ ಹೆಣ್ಣು ಹೊರಗಿನ ದುಡಿಮೆಯಿಂದ ಬಳಲುವುದರ ಜೊತೆಗೆ; ಸಂಯಮದ ಕಟ್ಟೆಯೊಡೆದಾಗ ಮಾನಸಿಕವಾಗಿಯೂ ಬಳಲತೊಡಗುತ್ತಾಳೆ. ಆಗ ಅವಳಿಗೆ ದುಡುಮೆಯ ಉತ್ಸಾಹವೂ ಕುಗ್ಗಿ, ಹಣಕ್ಕಾಗಿ ದುಡಿಯುವ ಪ್ರವೃತ್ತಿ ಅಧಿಕವಾಗತೊಡಗುತ್ತದೆ. ಇದರಿಂದ ದೇಶಕ್ಕೆ ಅವಳಿಂದ ಸಲ್ಲಬೇಕಾದಷ್ಟು ಸೇವೆ, ಸರಿಯಾಗಿ ಸಲ್ಲದೆ, ನಾಡೇ ಕಳಾಹೀನವಾಗ ತೊಡಗುತ್ತದೆ.

ಹೆಣ್ಣು ವಿದ್ಯಾವತಿಯಾಗಬೇಕು, ದೇಶಕ್ಕಾಗಿ ದುಡಿಯಬೇಕು. ಆದರೆ ಅವಳು ತನ್ನ ಸಂಯಮ ಶಕ್ತಿಯನ್ನು ಕಾಪಾಡಿಕೊಳ್ಳಬೇಕು ದುಷ್ಟ ಶಕ್ತಿಗಳನ್ನು ಎದುರಿಸಿ ನಡೆಯುವ ಮನೋಧಾರಢ್ಯವನ್ನು ಬೆಳೆಸಿಕೊಳ್ಳಬೇಕು. ಸಮಾಜ ಸಂಸಾರ, ಹೆಣ್ಣನ್ನು ಗೌರವಯುತವಾಗಿ ನಡೆಸಿಕೊಂಡಾಗಲೇ ಅವಳಿಗೂ, ನೆಮ್ಮದಿ, ನಾಡಿನ ಏಳಿಗೆಗೂ ಒಳಿತು. —

## ಬಂಗಾಲದ ಭಕ್ತ ಬಾವುಲರು

(6 ನೇ ಪುಟದಿಂದ)

ಬಾವುಲರು ತಮ್ಮ ಉದಾತ್ತ ತತ್ವಗಳಿಗೆ ಪ್ರಸಿದ್ಧಿಯನ್ನೂ, ಗೌರವವನ್ನೂ ಪಡೆದಂತವರಲ್ಲಿ ಅನೇಕರು ತಮ್ಮ ಅನೈತಿಕ ಜೀವನದಿಂದಲೂ ಸಮಾಜದ ನಿಂದೆ, ಅವಹೇಳನಕ್ಕೆ ಗುರಿಯಾಗಿದ್ದಾರೆ. ಇವರನ್ನು ಸಮಾಜದ ಸುಸಂಸ್ಕೃತ ವ್ಯಕ್ತಿಗಳು ಸಂಶಯದೃಷ್ಟಿಯಿಂದ ತಿರಸ್ಕಾರದಿಂದ ಕಾಣಲು ಇವರ ಸ್ವಚ್ಛಂದ, ಅಪವಿತ್ರ, ವಿಲಾಸೀ ಜೀವನವೇ ಕಾರಣ. ಕೆಲವರು ತಮ್ಮ ಜೀವನ ನಿರ್ವಾಹಕ್ಕಾಗಿ ವೇಷ ಬದಲಿಸಿ ತಮ್ಮನ್ನು ಬಾವುಲರೆಂದು ಕರೆದುಕೊಂಡು ಹಳ್ಳಿಯ ಮುಗ್ಧ ಜನರನ್ನು ಮೋಸಗೊಳಿಸಲು ಯತ್ನಿಸಿದರು ಸಾಧಕರಲ್ಲಿ ಆತ್ಯಂತಿಕ ಸತ್ಯದ ಅನ್ವೇಷಣೆಗಾಗಿ ಕಾಣುವ ತೀವ್ರ ಆಕಾಂಕ್ಷೆಯಾಗಲಿ, ವ್ಯಾಕುಲತೆಯಾಗಲಿ ಇವರಲ್ಲಿ ಮೂಡದೆ ಹೋಯಿತು. ಬಾವುಲ ಗೀತೆಗಳಲ್ಲಿ ಘನೀಭೂತವಾದ ಆತ್ಮಾನುಭವ ಕ್ರಮಶಃ ಕಡಿಮೆಯಾಗತೊಡಗ್ಗಿರಿಂದ ಈ ಪಂಥ ಜನಪ್ರಿಯತೆಗೆ ಎರವಾಗಬೇಕಾಯಿತು.

ಕಲ್ಕತ್ತಾ ವಿಶ್ವವಿದ್ಯಾಲಯ, ವಂಗ ಸಾಹಿತ್ಯ ಪರಿಷತ್ತು ಮತ್ತು ವಿದ್ವಾಂಸರು ಈ ಲೋಕ ಗೀತೆಗಳ ಹಿಂದಿರುವ ತಾತ್ವಿಕ ಒಳನೋಟವನ್ನು ಅರಿತು ಇವುಗಳನ್ನು ಸಂಗ್ರಹಿಸಿ ಜನತೆಗೆ ಕೊಟ್ಟಿದ್ದಾರೆ. ಬಾವುಲ ಪಂಥ ಹಿಂದಿನ ಕೀರ್ತಿ, ಗೌರವಗಳನ್ನು ಕಳೆದುಕೊಂಡಿದ್ದರೂ ಸಂಪೂರ್ಣವಾಗಿ ನಶಿಸಿಹೋಗಿಲ್ಲ. ಬಂಗಾಲದ ಹಳ್ಳಿಗಳಲ್ಲಿ ಆಗಾಗ ಏಕತಾರದ ಮಧುರದೊಂದಿಗೆ ಮಿಲಿತವಾದ ಬಾವುಲನ ಸುಂದರ ಧ್ವನಿ, ಕೇಳುವವನನ್ನು ಇಂದ್ರಿಯಗಳ ಆಪ್ತಪರಿಧಿ ಬಾಹುಗಳಿಂದ ಬಿಡಿಸಿ, ಸಂಸಾರದ ಬೇಗೆಯಿಂದ ಮೇಲೆತ್ತಿ ಮನಸ್ಸನ್ನು ತಣಿಸುವುದು. —

# ಸಿದ್ಧಗಂಗಾ ಪತ್ರಿಕೆ ಚಿರಾಯುವಾಗಲೆಂದು ಹರಸಿ ಹಾರೈಸಿರುವ ಸದಸ್ಯರ ಬಳಗ

[ಮುಂದುವರೆದ ಪಟ್ಟಿ]

229 ಶ್ರೀ ಎಂ. ಮಹದೇವಪ್ಪ
ಮೈಸೂರು

230 ಶ್ರೀ ಎಂ.ಜಿ. ಸಿದ್ಧನಗೌಡ,
ಸಿಂಗೆರೆ, ಚಿತ್ರದುರ್ಗಜಿಲ್ಲ

231 ಶ್ರೀ ಬಿ. ಸುಬ್ಬಯ್ಯ,
ಮಲ್ಲೇಶ್ವರಂ, ಬೆಂಗಳೂರು

232 ಶ್ರೀ ಪಿ.ಎಂ ಗುರುಸ್ವಾಮಿ;
ಜಯಲಕ್ಷ್ಮಿಪುರಂ, ಮೈಸೂರು

233 ಶ್ರೀ ಆರ್. ಗಂಗಾಧರಯ್ಯ
ಸಿದ್ಧಗಂಗಾ ರೂರಲ್ ಹೈಸ್ಕೂಲ್
ಪುರುಷನಹಳ್ಳಿ, ದೊಡ್ಡಬಳ್ಳಾಪುರ ತಾ||

234 ಶ್ರೀ ಎನ್.ಬಿ. ಮಹಾಂತಗೌಡ,
ಪ್ಲಾಂಟರ್
ನಾರ್ವೆ, ಹಾಸನಜಿಲ್ಲೆ

235 ಶ್ರೀ ವಿ.ಎ. ಹಳೇಮನಿ
ಇಂಗಳಹಳ್ಳಿ, ಹುಬ್ಬಳ್ಳಿ ತಾ||

236 ಶ್ರೀ ಡಿ.ಎನ್. ಚಿದಾನಂದಯ್ಯ
C/o 56 Apo

237 ಶ್ರೀ ಎನ್. ಸೊಣ್ಣಪ್ಪ
ತಿರುಮಲೇನಹಳ್ಳಿ, ದೇವನಹಳ್ಳಿ ತಾ||

238 ಶ್ರೀ ಸಿ.ಬಿ. ಕರಣಿ, ಕಂಟ್ರ್ಯಾಕ್ಟರ್,
ಮುಧೋಳ್, ಬಿಜಾಪುರಜಿಲ್ಲೆ

239 ಶ್ರೀ ಎಂ ಪಿ. ಸದಾಶಿವಯ್ಯ,
ಅಸಿಸ್ಟೆಂಟ್, ಇಂಜನಿಯರ್
ಮುಧೋಳ್, ಬಿಜಾಪುರ ಜಿಲ್ಲೆ

240 ಶ್ರೀಮತಿ ಶಿವಮ್ಮ
W/o ಕೆ.ಎಸ್.ಸಿ. ಶೇಖರ್
ಬೆಂಗಳೂರು—10

241 ಶ್ರೀ ಎಂ.ಎ. ನಾಗರಾಜ್
ಜಯನಗರ, ಬೆಂಗಳೂರು—11

242 ಶ್ರೀ ಎನ್. ರಾಜಗೋಪಾಲಚಾರ್
S/o ನಂಜುಂಡಾಚಾರ್
ಬೂದಿಗೆರೆ, ದೇವನಹಳ್ಳಿ ತಾ||

243 ಶ್ರೀ ಮಂಜುನಾಥ್
S/o ಚಿಕ್ಕವೀರಣ್ಣ
ಬೂದಿಗೆರೆ, ದೇವನಹಳ್ಳಿ ತಾ||

244 ಶ್ರೀ ಎನ್. ಬೀರಪ್ಪ
S/o ನಾರಾಯಣಪ್ಪ,
ಬೂದಿಗೆರೆ, ದೇವನಹಳ್ಳಿ ತಾ||

245 ಶ್ರೀಮತಿ ಪಾರ್ವತಮ್ಮ
ಚಿಕ್ಕಬಳ್ಳಾಪುರ

"SIDDAGANGA" Monthly, Sree Siddaganga Mutt. KRN Q-'
Registered with the Registrar of News paper for India under No. 17139/69



ಶ್ರೀ ಶಿವಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.